**WATER RESOURCES DEPARTMENT (MINOR IRRIGATION)**
**M.I.DIVISION, BELGAUM**
**INVITATION FOR TENDERS (IFT)**
**(As Per Standard Tender Document KW-3)**
**IFT No.EE /MID/BGM/TND/AE & JE/08-09/419, Dated: 4th February 2009**

1. The Executive Engineer M.I.Division, Belgaum. Invites tenders from eligible tenderers, for the construction of works detailed in the Table below. The tenderers may submit tenders for any or all of the works given in the Table. Two Cover Tender procedure as per Rule 28 of the KTPP Act shall be followed. The Tenders are required to submit two separate sealed covers, one containing the Earnest money deposit and the details of their capability to undertake the tender (as detailed in IFT Clause 3 and 6), which will be opened first and the second cover containing the price tender which will be opened only if the Tenderer is found to be qualified to execute the tendered work. The Tenderers are advised to note the minimum qualification criteria specified in Clause 3 of the Instructions to Tenderers to qualify for award of the contract.
2. Tender documents may be purchased from the office of Executive Engineer from 04.03.2009 to 21.03.2009 for a non-refundable fee (for two sets) as indicated in the Table below, in the form of cash or Demand Draft/Pay Order on any Nationalized/Scheduled bank payable at Belgaum in favour of Executive Engineer M.I.Division, Belgaum. Interested tenders may obtain further information at the same address. Tender documents requested by mail will be dispatched by registered/speed post on payment of an extra amount of Rs.200/-. The Executive Engineer M.I.Division, Belgaum, will not be held responsible for the postal delay if any, in the delivery of the documents or non-receipts of the same.
3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender. (Total 135 days Validity from the date of opening of Tender)
4. Tenders must be delivered at the office of the Chief Engineer, M.I.(N) Zone, Bijapur or office of the Superintending Engineer, M.I.Circle, Belgaum or office of the Executive Engineer M.I.Division, Belgaum. On or before 16.00 hours on 27.3.09. The First Cover Tenders will be opened on the ~~same day~~/ next day at 16.00 hours, in the presence of the Tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.
5 Other details can be seen in the Standard Tender Documents (KW-3)

**TABLE**

| Package No. | Name of work | Approximate value of work (Rs. In lakhs) | Earnest Money Deposit (Rs.) | Cost of document (Rs.) | Period of completion |
|---|---|---|---|---|---|
| 1. | Raising of B.C.B across Ghataprabha River near Awaradi by 2M in Gokak Taluka, Belgaum Dist. | 80.40 | 1,60,800/- | 8100+ Tax | 12 Months (including monsoon) |
| 2. | Construction of B.C.B across Kallalhalla between Ainapur-Shedbal road near Laxmi temple Tq. Athani Dist. Belgaum | 79.00 | 1,58,000/- | 7900+ Tax | 12 Months (including monsoon) |

| Package No. | Name of work | Approximate value of work (Rs. In lakhs) | Earnest Money Deposit (Rs.) | Cost of document (Rs.) | Period of completion |
|---|---|---|---|---|---|
| 3. | Construction of Percolation Tank across Yallammana halla near Kottalagi Village Tq.Athani. Dist Belgaum | 76.30 | 1,16,500/- | 7650+ Tax | 12 Months (including monsoon) |
| 4. | Construction of Barrage Markandeya River near Hindalaga Village Tq.&Dist. Belgaum | 63.00 | 1,26,000/- | 6300 + Tax | 12 Months (including monsoon) |
| 5. | Improvement of M.I.Tank at Ghastolli in Khanapur Tq. Belgaum Dist. | 78.00 | 1,56,000/- | 7800+ Tax | 9 Months (including monsoon) |
| 6. | Improvements to M.I. Tank at Yallur Sy.No.1080 in Belgaum Tq. & Dist | 55.00 | 1,10,000/- | 5500+ Tax | 6 Months (including monsoon) |
| 7. | Construction of BCB near Sagare Village in Khanapur Tq. Belgaum Dist | 84.00 | 1,68,000/- | 8400+Tax | 12 Months (including monsoon) |

**N.M. MANAGOLI**
P.R. 159
Executive Engineer,
M.I.Division, Belgaum

## ಜಿಲ್ಲಾ ಪೊಲೀಸ್ ಕಛೇರಿ, ಹಾಸನ ಜಿಲ್ಲೆ, ಹಾಸನ

## ಅಧಿಸೂಚನೆ

**ಸಂಖ್ಯೆ:ಪಿಎಂಟಿ:110/02–03, ದಿನಾಂಕ: 11ನೇ ಫೆಬ್ರವರಿ 2009**

**ವಿಷಯ:** ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಅನುಪಯುಕ್ತ ಪೊಲೀಸ್ ವಾಹನಗಳನ್ನು ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಪೊಲೀಸ್ ಪ್ರಧಾನ ಕಛೇರಿಯ ಆದೇಶ ಸಂಖ್ಯೆ. ಎಂ.ಸಾ(1) 18/08–09 ದಿನಾಂಕ: 31.12.08.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 12.03.2009 ರಂದು ಬೆಳಿಗ್ಗೆ 11–00 ಗಂಟೆಗೆ ಸರಿಯಾಗಿ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನದ ಪೆರೇಡ್ ಮೈದಾನ, ಹೊಸಲೈನ್ ರಸ್ತೆ ಹಾಸನದಲ್ಲಿ ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಕೆಳಕಂಡ ಅನುಪಯುಕ್ತ ವಾಹನಗಳ ಟೆಂಡರ್ ಕಂ. ಬಹಿರಂಗ ಹರಾಜು ಮೂಲಕ ವಿಲೇವಾರಿಗೊಳಿಸಲಾಗುವುದು. ಸದರಿ ಅನುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ, ಹೊಸಲೈನ್‌ರಸ್ತೆಯಲ್ಲಿ ಕಛೇರಿಯ ವೇಳೆಯಲ್ಲಿ ನೋಡಲು ಅವಕಾಶವಿರುತ್ತದೆ. ಸದರಿ ಅನುಪಯುಕ್ತ ವಾಹನಗಳ ವಿವರಗಳನ್ನು ಈ ಕೆಳಗೆ ನಮೂದಿಸಲಾಗಿದೆ.

| ಕ್ರ. ಸಂ. | ವಾಹನ ಮಾದರಿ ಮತ್ತು ಸಂಖ್ಯೆ | ನಮೂನೆ |
|---|---|---|
| 1 | ಮಾರುತಿ ಜಿಪ್ಸಿ, ಕೆಎ–32–ಜಿ–61 | 1992 16 ವರ್ಷ |
| 2 | ಮಾರುತಿ ಜಿಪ್ಸಿ, ಕೆಎ–13–ಜಿ–123 | 1992 16 ವರ್ಷ |
| 3 | ಮೆಟಡೋರ್ ಸಿಕೆಜಿ–451 | 1987 21 ವರ್ಷ |
| 4 | ಮಹೀಂದ್ರ ಜೀಪು ಸಿಎಜಿ–5708 | 1987 21 ವರ್ಷ |

**ಹರಾಜಿನ ಷರತ್ತುಗಳು ಮತ್ತು ನಿಬಂಧನೆಗಳು:**

1) ಸದರಿ ಅನುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ ಹೊಸಲೈನ್ ರಸ್ತೆ ಹಾಸನದಲ್ಲಿ ಬಹಿರಂಗ ಹರಾಜು ಮಾಡಲಾಗುವುದು. ಅವುಗಳು ಹಾಲಿ ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.

2) ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸುವ ಪ್ರತಿಯೊಬ್ಬರು ಪ್ರತಿ ವಾಹನ ಒಂದಕ್ಕೆ ರೂ.3,000–00 ಠೇವಣಿಯನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಪಾವತಿಸದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3) ಟೆಂಡರುಗಳನ್ನು ಸಲ್ಲಿಸಬಯಸುವ ಸಾರ್ವಜನಿಕರು ಮೊಹರು ಮಾಡಿದ ಲಕೋಟೆಯ ಮೇಲ್ಭಾಗದಲ್ಲಿ "ನಿರುಪಯುಕ್ತ ವಾಹನಗಳಿಗಾಗಿ" ಎಂದು ಬರೆದು ಅದರಡಿಯಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಹಾಸನ ಎಂದು ನಮೂದಿಸಿ ಈ ವಿಳಾಸಕ್ಕೆ ಖುದ್ದಾಗಿ ಇಲ್ಲವೇ ಅಂಚೆ ಮೂಲಕ ದಿನಾಂಕ 10.03.2009 ರಂದು ಸಂಜೆ 4–00 ಗಂಟೆ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.

4) ಪ್ರತಿಯೊಬ್ಬ ಟೆಂಡರುದಾರರು ಪ್ರತಿ ವಾಹನಕ್ಕೆ ರೂ. 3,000–00 (ಮೂರು ಸಾವಿರ) ರೂಪಾಯಿಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಇವರ ಹೆಸರಿನಲ್ಲಿ ತೆಗೆಸಿದ ಡಿ.ಡಿ.ಯನ್ನು ಟೆಂಡರ್ ಜೊತೆ ಲಗತ್ತಿಸಬೇಕು. ಡಿ.ಡಿ. ಯನ್ನು ಕ್ರಾಸ್ ಮಾಡಬಾರದು. ಹಾಗೆ ಮಾಡಿದಲ್ಲಿ ಅದನ್ನು ಅನರ್ಹವೆಂದು ಪರಿಗಣಿಸಲಾಗುವುದು.

5) ಯಾವುದೇ ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಹಾಗೂ ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

6) ಟೆಂಡರ್ ಫಾರಂನಲ್ಲಿ ಹೆಚ್ಚಿನ ಮೊತ್ತವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಿರಬೇಕು.

7) ಈ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಬಹಿರಂಗಪಡಿಸುವರು. ಹರಾಜಿನಲ್ಲಿ ದಾಖಲಾದ ಹೆಚ್ಚಿನ ಬಿಡ್ ಬೆಲೆ ಅಥವಾ ಟೆಂಡರಿನಲ್ಲಿ ದಾಖಲಿಸಿದ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್:ಬಿಡ್‌ದಾರರೆಂದು ಪರಿಗಣಿಸಲಾಗುವುದು.

8) ಯಶಸ್ವಿಯಾದವರ ಅಂಗೀಕೃತ ಹೆಚ್ಚಿನ ಬೆಲೆಯಲ್ಲಿ ಶೇಕಡ 25 ರಷ್ಟು ಹಣವನ್ನು ಅವರು ಹರಾಜಿನ ಸ್ಥಳದಲ್ಲಿ ಹರಾಜಿನ ದಿನವೇ ತುಂಬತಕ್ಕದ್ದು. ಈ ಹಣಕ್ಕೂ ಯಾವುದೇ ಬಡ್ಡಿ ನೀಡಲಾಗುವುದಿಲ್ಲ. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರಿಂದ ವಿಲೇವಾರಿಗೆ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಹಾಗೂ ಮಾರಾಟ ತೆರಿಗೆ ಇತ್ಯಾದಿಯನ್ನು ಕಟ್ಟಿಸಿಕೊಳ್ಳಲಾಗುವುದು. ಹಾಗೂ ಪ್ರಾದೇಶಿಕ ಶುಲ್ಕ ವಗೈರೆ ಅವರ ಸ್ವಂತ ಹಣದಿಂದ ಭರಿಸಿ ಮಾಲೀಕತ್ವ ಬದಲಾವಣೆ ಮಾಡಿಕೊಂಡ ಬಗ್ಗೆ ದಾಖಲಾತಿಗಳನ್ನು ಒದಗಿಸಿದ ನಂತರ ಇಲ್ಲವೇ ವಾಹನ ಉಪಯೋಗಿಸದೇ ಕುಟ್ಟು ಗುಜರಿಗೆ ಹಾಕಲಾಗುವುದೆಂದು ಬರೆದುಕೊಟ್ಟ ಮೇಲೆ ಅವರ ಸ್ವಂತ ಖರ್ಚಿನಲ್ಲಿ ಸಾಗಿಸಿಕೊಳ್ಳಲು ವಾಹನಗಳನ್ನು ಯಶಸ್ವಿದಾರರ ವಶಕ್ಕೆ ವಹಿಸಿಕೊಡಲಾಗುವುದು.

9) ಎಲ್ಲಾ ಹಣವನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಹಾಸನ ಇವರ ಕಛೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿಡಿ ಮೂಲಕ ಹಣ ಸ್ವೀಕರಿಸುವುದಿಲ್ಲ.

10) ಅನುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಿಧಿಸಿ ವಸೂಲು ಮಾಡಲಾಗುವುದು.

11) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರು:ಬಿಡ್‌ದಾರರ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು. ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರತಕ್ಕದ್ದು.

12) ಯಶಸ್ವಿಯಾದ ಟೆಂಡರ್:ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿರುವ ಹಣದಲ್ಲಿ ನಷ್ಟವನ್ನು ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುವುದು.

13) ಈ ಹರಾಜಿನ ವಿಷಯದಲ್ಲಿ ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ ಇವರು ಹೊಂದಿರುತ್ತಾರೆ. ಮತ್ತು ಇವರ ತೀರ್ಮಾನವೇ ಅಂತಿಮವಾದದ್ದು.

14) ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ–ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.

15) ಹರಾಜಿನಲ್ಲಿ ಭಾಗವಹಿಸುವ ಎಲ್ಲ ಬಿಡ್‌ದಾರರು ತಮ್ಮ ಪರಿಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡಿ ಹೆಸರನ್ನು ನೊಂದಾಯಿಸಿಕೊಳ್ಳತಕ್ಕದ್ದು.

16) ಟೆಂಡರ್ ಫಾರಂಗಳಲ್ಲಿ ಟೆಂಡರುದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಟೆಂಡರ್ ಫಾರಂ ನಮೂನೆಯನ್ನು ಈ ಕೆಳಗೆ ಕೊಡಲಾಗಿದೆ.

ಸೂಪರಿಂಟೆಂಡೆಂಟ್ ಆಫ್ ಪೊಲೀಸ್,
ಹಾಸನ ಜಿಲ್ಲೆ, ಹಾಸನ.

**ಟೆಂಡರ್ ಫಾರಂ ನಮೂನೆ**

**ಅನುಪಯುಕ್ತ ಪೊಲೀಸ್ ವಾಹನಗಳಿಗಾಗಿ ಟೆಂಡರು**

ಗೆ,

ಪೊಲೀಸ್ ಸೂಪರಿಂಟೆಂಡೆಂಟ್ ರವರು,
ಹಾಸನ ಜಿಲ್ಲೆ, ಹಾಸನ.

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ:ಪಿಎಂಟಿ:110:02–2005 ದಿನಾಂಕ: 11–02–2009 ರಲ್ಲಿ ತಿಳಿಸಿರುವ------ ಸಂಖ್ಯೆಯ ವಾಹನವನ್ನು ರೂ.-------------/– (ರೂಪಾಯಿ------------)ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,

ಪಿ.ಆರ್. 190 (ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಕ್ಷಿಪ್ತ ಹರಾಜು ಪ್ರಕಟಣೆ**

**ಸಂಖ್ಯೆ:ಬಿ1/ಬನಾಹ.ಸಿಆರ್.13/2008–09, ದಿನಾಂಕ: 11ನೇ ಫೆಬ್ರವರಿ 2009**

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ತರೀಕೆರೆ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ನಾಟಾಗಳನ್ನು ಅನುಸೂಚಿಯಲ್ಲಿ ಸೂಚಿಸಿರುವಂತೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಅಥವಾ ಇವರಿಂದ ಅಧಿಕಾರ ಪಡೆದ ಇತರೆ ಅಧಿಕಾರಿಗಳು ದಿನಾಂಕ: 13.03.2009 ರ ಬೆಳಿಗ್ಗೆ 10.00 ಗಂಟೆಗೆ ಈ ಕೆಳಗೆ ನಮೂದಿಸಿದ ಷರತ್ತಿಗೊಳಪಟ್ಟು ಹಾಗೂ ಸವಿಸ್ತಾರ ಹರಾಜು ಪ್ರಕಟಣೆ ನಿಬಂಧನೆಗಳ ಪ್ರಕಾರ ಬಹಿರಂಗ ಹರಾಜು ಮಾಡುವರು.

| ಕ್ರ. ಸಂ. | ಜಾತಿ | (ಅಂದಾಜು ಪ್ರಮಾಣ) |
|---|---|---|
| 1 | ಬೀಟೆ | 10.000 ಎಂ3 |
| 2 | ಸಾಗುವಾನಿ | 20.000 ಎಂ3 |
| 3 | ಇತರೆ ಜಾತಿ | 100.000 ಎಂ3 |
| 4 | ಸಾಗುವಾನಿ ಸೌದೆ | 35.000 ಎಂ3 |
| 5 | ಪೋಲ್ಸ್ | 200 ಸಂಖ್ಯೆ |

**ಷರತ್ತುಗಳು**

1. ನಾಟಾ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಸವಾಲುದಾರರು 20,000/– ರೂ ಮೌಲ್ಯದ ಮರ ಖರೀದಿಗೆ ಕನಿಷ್ಠ 5000/– ರೂ.ಗಳನ್ನು ಮತ್ತು ರೂ.20,000/– ಮೀರಿದ ಮೌಲ್ಯಕ್ಕೆ 20,000/– ರೂ.ಗಳನ್ನು ಮುಂಗಡ ಠೇವಣಿಯಾಗಿ ಕಟ್ಟಬೇಕು.
2. ಹರಾಜಿನ ದಿನವೆ ಒಟ್ಟು ಹರಾಜಿನ ಮೌಲ್ಯದ ಕಾಲುಭಾಗ ಹಣ ಮತ್ತು ಅನ್ವಯಿಸುವ ಎಲ್ಲಾ ತೆರಿಗೆಗಳನ್ನು ಕೆಳಕಂಡಂತೆ ಅಥವಾ ಹರಾಜಿನ ದಿನದಂದು ಚಾಲ್ತಿಯಲ್ಲಿರುವಂತೆ ಪೂರ್ಣವಾಗಿ ಪಾವತಿಸಬೇಕು. ಉಳಿದ ಮುಕ್ಕಾಲು ಭಾಗ ಹಣವನ್ನು ಹರಾಜು ದಿನಾಂಕದಿಂದ 60 ದಿನಗಳೊಳಗೆ ಪಾವತಿಸಿ 90 ದಿನಗಳಲ್ಲಿ ಮಾಲು ಎತ್ತುವಳಿ ಮಾಡಬೇಕು.

   ಅ. ಟಿಂಬರ್, ಪೋಲ್ಸ್ ಆರ್.ಕೆ.ಬಿಲ್ಲೇಟ್ಸ್ ವ್ಯಾಟ್ಸ್ 12.5%

   ಆ. ಎಫ್.ಡಿ.ಟಿ.= 8% ಇತರೆಯವರಿಗೆ, 12% ಕೈಗಾರಿಕೆಗಳಿಗೆ

   ಇ. ಆದಾಯ ತೆರಿಗೆ=2.5% ಮೌಲ್ಯ ವ್ಯಾಟ್ ಮತ್ತು ಎಫ್.ಡಿ.ಟಿ. ಮೇಲೆ

ಈ.ಸರ್‌ಚಾರ್ಜ್=2.5% ಆದಾಯ ತೆರಿಗೆ ಮೇಲೆ

ಉ.ಎಜುಕೇಷನ್ ಸಸ್ 3% ಆದಾಯ ತೆರಿಗೆ ಮತ್ತು ಸರ್‌ಚಾರ್ಜ್ ಮೇಲೆ

3. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಠೇವಣಿ ಕಟ್ಟುವ ಮೊದಲು ಚುನಾವಣಾಧಿಕಾರಿಗಳು ನೀಡಿರುವ ಗುರುತಿನ ಚೀಟಿ ಅಥವಾ ಆಹಾರ ಪಡಿತರ ಚೀಟಿ ಅಥವಾ ಡ್ರೈವಿಂಗ್ ಪರವಾನಿಗೆ ಇವುಗಳಲ್ಲಿ ಯಾವುದಾದರೂ ಒಂದು ಗುರುತಿನ ಚೀಟಿ ಹಾಜರುಪಡಿಸತಕ್ಕದ್ದು.
4. ಇತರೆ ಷರತ್ತುಗಳನ್ನು ಕಛೇರಿಯಿಂದ ಅಥವಾ ಸಂಬಂಧಪಟ್ಟ ಡಿಪೋ ವಲಯ ಅರಣ್ಯಾಧಿಕಾರಿಯವರ ಕಛೇರಿಯಿಂದ ಪಡೆಯಬಹುದಾಗಿದೆ.
5. ಟ್ಯಾನ್ ಮತ್ತು ಟಿನ್ ಸಂಖ್ಯೆಗಳನ್ನು ಸಂಬಂಧಿಸಿದ ಆದಾಯ ತೆರಿಗೆ ಮತ್ತು ವಾಣಿಜ್ಯ ತೆರಿಗೆ ಅಧಿಕಾರಿಗಳಿಂದ ಕಡ್ಡಾಯವಾಗಿ ಪಡೆದು ಹರಾಜು ಭಾಗವಹಿಸುವ ಪೂರ್ವ ಹಾಜರುಪಡಿಸಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಭದ್ರಾವತಿ ವಿಭಾಗ, ಭದ್ರಾವತಿ**

**ಪ್ರಕಟಣೆ**

**ಕ್ರ.ಸಂ:ಬಿ1–ಬನಾಹ–ಸಿಆರ್–13/2008–09, ದಿನಾಂಕ: 11ನೇ ಫೆಬ್ರವರಿ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಭದ್ರಾವತಿ ಅರಣ್ಯ ವಿಭಾಗದಲ್ಲಿನ ಈ ಕೆಳಗೆ ನಮೂದಿಸಿರುವ ತರೀಕೆರೆ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿ ಲಭ್ಯವಿರುವ ಬೀಟೆ, ಸಾಗುವಾನಿ ಹಾಗೂ ಇತರೆ ಜಾತಿಯ ಮರಮುಟ್ಟುಗಳನ್ನು ಈ ಕೆಳಕಂಡ ಡಿಪೋವಿನ ಎದಿರು ಸೂಚಿಸಿರುವ ದಿನಾಂಕದಂದು ಬಹಿರಂಗ ಹರಾಜು ಮಾರಾಟದಲ್ಲಿ ವಿಕ್ರಯಿಸಲು ಸಾಮಾನ್ಯ ಅವಗಾಹನೆಗಾಗಿ ಪ್ರಕಟಿಸಿದೆ.

| ಕ್ರ. ಸಂ. | ನಾಟ ಡಿಪೋದ ಹೆಸರು | ಹರಾಜು ದಿನಾಂಕ | ಬೀಟೆ ನಾಟ | ಸಾಗುವಾನಿ ನಾಟ | ಇತರೆ ಜಾತಿ ನಾಟ | ಸಾಗುವಾನಿ ಸೌದೆ | ಪೋಲ್ಸ್ |
|---|---|---|---|---|---|---|---|
| 1 | ಸರ್ಕಾರಿ ನಾಟಾ ಸಂಗ್ರಹಾಲಯ, ತರೀಕೆರೆ ತಾಲ್ಲೂಕು, ತರೀಕೆರೆ ಚಿಕ್ಕಮಗಳೂರು ಜಿಲ್ಲೆ, ಕರ್ನಾಟಕ ರಾಜ್ಯ | 13.03.2009 | ಸರ್ಕಾರಿ–10.000 ಎಂ3 | 20.000 ಎಂ3 | 100.000 ಎಂ3 | 35.00 ಎಂ3 | 200 ಸಂಖ್ಯೆ |

**ಟಿಪ್ಪಣಿ:** 1. ಮೇಲ್ಕಾಣಿಸಿದ ಪರಿಮಾಣ ಅಂದಾಜಿನದಾಗಿದ್ದು, ಅದು ಸೂಚಿಸಿರುವುದಕ್ಕಿಂತ ಹೆಚ್ಚಾಗಲೂಬಹುದು ಅಥವಾ ಕಡಿಮೆಯಾಗಲೂ ಬಹುದು.

2. ಮಾರಾಟದ ಅಧಿಸೂಚನೆಯ ಪ್ರತಿಗಳಿಗಾಗಿ ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿಯ ವೇಳೆಯಲ್ಲಿ (ರಜಾ ದಿನಗಳನ್ನು ಹೊರತುಪಡಿಸಿ) ಸಂಪರ್ಕಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ

**BHADRAVATHI FOREST DIVISION**

**BRIEF SALE NOTIFICATION**

**No.B1.SAS.CR.13/2008-09, Dated: 11th February 2009**

**Sub:** Auction sale of Timber and other forest produce in Govt. Timber Depot. Tarikere on 13.03.2009.

**Ref:** No.B4.SAS.CR./4/08-09 dtd: 10.02.2009 of the Conservator of Forests, Shimoga Circle, Shimoga.

It is hereby notified for the general information of the public that the Timber and other forest produce as detailed here below will be sold in the Government Timber Depot. Tarikere in public auction on 13.03.2009 from 10.00 A.M. by the Deputy Conservator of Forests, Bhadravathi Division, Bhadravathi or the authorized officer subject to condition to the detailed sale notifications.

| Sl. No. | Species | Approximate quantity |
|---|---|---|
| 1 | Beete | 10.000 m3 |
| 2 | Teak | 20.000 m3 |
| 3 | Other kinds | 100.000 m3 |

| Sl. No. | Species | Approximate quantity |
|---|---|---|
| 4 | Teak Fire wood | 35.000 m3 |
| 5 | Poles | 200 Nos. |

**CONDITIONS**

1. Each intending bidders should deposit a sum of Rs.5,000/- if value of timber does not exceed Rs.20,000/- & Rs.20,000/- if exceeds, Rs.20,000/- as EMD.
2. Each bidders should pay 1/4th sale value plus full taxes at the rates given below or at the prevailing rates in force on the sale date immediately after conclusion of the sale. The remaining 3/4th value should be paid within 60 days from the date of sale. Material should be lifted within 90 days from the date of issue of release order.
   a) VAT-12.5% b) FDT-for other than industries 8% for industries. 12% c) Income Tax 2.5% on value, VAT & FDT d) SC on IT 2.5% e) Education cess 3% on IT & Sc.
3. Each intending bidder should produce identity card issued by the Election Commissioner or Ration card or Driving Licence. Otherwise the bidder will not be allowed to participate in the sale.
4. Further details can be had from the division office or the concerned depot office.
5. Each intending bidder should produce TAN and TIN No. allotted by Income Tax & Vat Officers.

Deputy Conservator of Forests,
Bhadravathi Division, Bhadravathi

**KARNATAKA FOREST DEPARTMENT**

**Office of the Deputy Conservator of Forests, Bhadravathi Division, Bhadravathi**

**NOTIFICATION**

**No.B1-SAS-CR-13/2008-09, Dated: 11th February 2009**

It is hereby notified for the information of General Public that the logs of Beete, Teak, Other kinds, Teak F/w and poles available in the Government Timber Depot Tarikere of Tarikere Taluk, Chikmagalur District of Karnataka State will be sold in public auction on the date shown against the Depot.

| Sl. No. | Name of the Depot | Date of Sale | Beete | Teak Timber | Other Kind timber | Teak F/w | Poles |
|---|---|---|---|---|---|---|---|
| 1. | GTD, Tarikere Chikmagalur Dist. | 13.03.2009 | Govt.-10.000m3 | 20.00m3 | 100.000 m3 | Govt-35.000m3 | 200 nos |

**Note:** The quantity shown is approximate and it may be increased or decreased.

Deputy Conservator of Forests,
Bhadravathi Division, Bhadravathi.

P.R. 193

**ಕಂದಾಯ ಇಲಾಖೆ**

**ಗ್ರಾಮಲೆಕ್ಕಿಗರ ನೇಮಕಾತಿ ಪ್ರಾಧಿಕಾರ**

**ಸಂಖ್ಯೆಃಗ್ರಾ.ಲೆ.ಸಿಬ್ಬಂದಿ. ಸಿಆರ್. 305 /08.09, ದಿನಾಂಕಃ 28ನೇ ಫೆಬ್ರವರಿ 2009**

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕಃ 30-3-2009**

**ಅಧಿಸೂಚನೆ**

ತುಮಕೂರು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ 64 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ವರ್ಗೀಕರಣ ಮತ್ತು ಮೀಸಲಾತಿ ಅನ್ವಯ ಕರ್ನಾಟಕ ನಾಗರಿಕ ಸೇವೆಗಳು ( Revenue subordinate Branch) (Cadre & Recruitment) (Amendment) ನಿಯಮಗಳು 2008 ನಿಯಮ 2 ರ ಅನ್ವಯ ನೇಮಕಾತಿಯನ್ನು ಮಾಡಲು ಅರ್ಹ ಅಭ್ಯರ್ಥಿಗಳಿಂದ ಪ್ರಾಧಿಕಾರವು ನಿಗದಿಪಡಿಸಿರುವ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದೆ. ಈ ನೇಮಕಾತಿಯಲ್ಲಿ ಅಭ್ಯರ್ಥಿಗಳ ಆಯ್ಕೆಯನ್ನು ಅವರು ಗಳಿಸಿರುವ ಅಂಕಗಳನ್ನು ಆಧರಿಸಿ ಅರ್ಹತಾನುಸಾರ ಮತ್ತು ಚಾಲ್ತಿಯಲ್ಲಿರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗಳಿಗೆ ಅನುಗುಣವಾಗಿ ಆಯ್ಕೆ ಮಾಡಲಾಗುತ್ತದೆ.

**ನಿಬಂಧನೆಗಳು**

1 ಈ ನೇಮಕಾತಿಯು ಗ್ರಾಮ ಲೆಕ್ಕಿಗರ ಹುದ್ದೆಗೆ ಮಾತ್ರ. ಅನ್ವಯಿಸುತ್ತದೆ.

2 ಅರ್ಜಿ ಶುಲ್ಕವನ್ನು ಪ.ಜಾ/ಪ.ಪಂ/ಮಾಜಿಸೈನಿಕರು/ಪ್ರವರ್ಗ1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ 100/- ರೂ ಹಾಗೂ ಇತರೆ ಅಭ್ಯರ್ಥಿಗಳಿಗೆ 200/- ರೂಪಾಯಿಗಳು. ಅಭ್ಯರ್ಥಿಗಳು ಅರ್ಜಿಯನ್ನು ಪಡೆಯುವ ವೇಳೆ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ, ತುಮಕೂರು ಇವರ ಹೆಸರಿಗೆ ಖರೀದಿಸಲಾದ ಡಿ.ಡಿ ಯನ್ನು ಸಲ್ಲಿಸಿ ಅರ್ಜಿಯನ್ನು ಪಡೆಯಬಹುದು.

**3 ಅರ್ಜಿ ಮಾರಾಟದ ಕೊನೆಯ ದಿನಾಂಕ 26.03.2009.**

4 ಅರ್ಜಿ ನಿಗಧಿತ ನಮೂನಯು ಮೂಲ ಪ್ರತಿಯಲ್ಲಿಯೇ ಇರಬೇಕು. ಜಿಲ್ಲಾಧಿಕಾರಿಗಳು, ತುಮಕೂರು ಇವರ ಕಛೇರಿಯಿಂದಲೇ ಪಡೆಯ ಬೇಕು. (ಜೆರಾಕ್ಸ್ ಅರ್ಜಿ ಸಲ್ಲಿಸುವಂತಿಲ್ಲ)

5 ಆಯ್ಕೆ ದಿನಾಂಕದಂದು ತುಮಕೂರು ಜಿಲ್ಲೆಯಲ್ಲಿರುವ ಗ್ರಾಮ ಲೆಕ್ಕಿಗರ ಖಾಲಿ ಇರುವ ಹುದ್ದೆಗಳಿಗೆ, ರೋಸ್ಟರ್ ಮತ್ತು ಮೆರಿಟ್ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

6 ನೇಮಕಾತಿ ಸಮಿತಿಯ ಮೂಲಕ ಮಾತ್ರ ಈ ನೇಮಕಾತಿ ಪ್ರಕ್ರಿಯೆ ನಡೆಯುತ್ತಿದ್ದು, ಯಾವುದೇ ವ್ಯಕ್ತಿ ಗಳ ಅಥವಾ ಸಂಸ್ಥೆಗಳ ಆಸೆ ಆಮಿಷಗಳಿಗೆ ಒಳಗಾಗದಿರಲು ತಿಳುವಳಿಕೆ ನೀಡಿದೆ.

7 ಸರ್ಕಾರಿ ರಜಾ ದಿನಗಳಂದು ಅರ್ಜಿ ನೀಡಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ.

8 ಭರ್ತಿ ಮಾಡಿದ ಅರ್ಜಿಗಳನ್ನು ಯಾವುದೇಕಾರಣಕ್ಕೂ ಅಂಚೆ ಮೂಲಕವಾಗಲಿ ಅಥವಾ ಕೊರಿಯರ್ ಮೂಲಕವಾಗಲಿ ಕಳುಹಿಸಬಾರದು.

9 ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ.

10 ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆಯನ್ನು ಹೊಂದಿರಬೇಕು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲಿನ ನಿಗದಿತ ವಿದ್ಯಾರ್ಹತೆಯ ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ.)

11 ಹುದ್ದೆಗಳ ವರ್ಗೀಕರಣ ಈ ರೀತಿ ಇರುತ್ತವೆ.

| ಕ್ರ. ಸಂ | ಮೀಸಲಾತಿ | ಇತರೆ | ಕನ್ನಡ ಮಾಧ್ಯಮ | ಮಹಿಳೆ | ಯೋಜನಾ ನಿರಾಶ್ರಿತರು | ಗ್ರಾಮೀಣ | ಮಾಜಿ ಸೈನಿಕ | ಅಂಗವಿಕಲ | ಒಟ್ಟು |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಪ.ಜಾ | 3 | - | 1 | - | 5 | - | 1 | 10 |
| 2 | ಪ.ಪಂ | - | - | - | - | 1 | - | 1 | 2 |
| 3 | ಪ್ರ.1 | 1 | - | 1 | 1 | - | - | - | 3 |
| 4 | ಪ್ರ-2(ಎ) | 3 | - | 3 | 1 | 3 | - | - | 10 |
| 5 | ಪ್ರ-2(ಬಿ) | 2 | - | 1 | - | - | - | - | 3 |
| 6 | ಪ್ರ-3(ಎ) | 1 | - | - | 1 | - | - | - | 2 |
| 7 | ಪ್ರ-3(ಬಿ) | - | - | - | - | 1 | - | 1 | 2 |
| 8 | ಸಾಮಾನ್ಯ | 4 | 3 | 13 | - | 6 | 6 | - | 32 |
| | **ಒಟ್ಟು** | **14** | **3** | **19** | **3** | **16** | **6** | **3** | **64** |

12 **ವೇತನ ಶ್ರೇಣಿಃ ಗ್ರಾಮಲೆಕ್ಕಿಗರು**

ರೂ. 5800-100-6000-125-6500-150-7100-175-7800-200-8600-225-9500-250-10500

13 **ವಯೋಮಿತಿಃ** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ) ಗರಿಷ್ಟ ವಯೋಮಿತಿ.

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪ.ಜಾತಿ/ಪ.ಪಂಗಡ ಪ್ರ-1 | 40 ವರ್ಷ |
| ವಿಧವೆಯರು, ಅಂಗವಿಕಲರು | ಚಾಲ್ತಿಯಲ್ಲಿ ನಿಗದಿಪಡಿಸಿರುವ ವಯೋಮಿತಿಗೆ 10 ವರ್ಷ ಹೆಚ್ಚಿಗೆ ಸೇರಿಸಿಕೊಳ್ಳಲಾಗುವುದು. |
| ಮಾಜಿ ಸೈನಿಕರು | ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. |

14 ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು/ಚಾಲ್ತಿಯಲ್ಲಿರಬೇಕು. ನಂತರ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

15 ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಸಂಬಂಧಪಟ್ಟ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು.

16 ಗ್ರಾಮೀಣ ಮೀಸಲಾತಿಯನ್ನು ಕೋರಿರುವ ಪ.ಜಾತಿ/ಪ.ಪಂ/ಪ್ರವರ್ಗ1, 2ಎ, 2ಬಿ,3ಎ, 3ಬಿ, ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ -2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

17 ಯೋಜನೆಗಳಿಂದ ನಿರ್ವಸತಿಗರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಪಡೆದಿರಬೇಕು.

18 ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ ವರ್ಗಾವಣೆಯ ಪ್ರಮಾಣ ಪತ್ರದ ಉಧೃತಭಾಗವನ್ನು (Extract of Cummulative record) ಲಗತ್ತಿಸತಕ್ಕದ್ದು. ಈ ದಾಖಲೆಗಳಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ನೇಮಕಾತಿ ಪ್ರಾಧಿಕಾರ ಪರಿಗಣಿಸುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

19 ಪ.ಜಾತಿ/ಪ.ಪಂ./ ಪ್ರವರ್ಗ-1, ಪ್ರವರ್ಗ-2ಎ, ಪ್ರವರ್ಗ 3ಎ, ಪ್ರವರ್ಗ-3ಬಿ, ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್/ ನಲ್ಲಿ ತಹಶೀಲ್ದಾರ್ ರವರಿಂದ ಪಡೆದಿರುವ ಪ್ರಮಾಣ ಪತ್ರದ ಪ್ರತಿ ಲಗತ್ತಿಸತಕ್ಕದ್ದು. ಜಾತಿ ಅಡಿಯಲ್ಲಿ ಆಯ್ಕೆಯಾಗುವ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು(ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

20 ನೇಮಕಾತಿ ಪ್ರಾಧಿಕಾರದ ತೀರ್ಮಾನವೇ ಅಂತಿಮ. ಇದರಿಂದ ಅಭ್ಯರ್ಥಿಗಳಿಗೆ ಅನಾನುಕೂಲವಾದಲ್ಲಿ ಪ್ರಾಧಿಕಾರವು ಹೊಣೆಯಾಗುವುದಿಲ್ಲ.

21 ನೇಮಕಾತಿ ಪ್ರಕ್ರಿಯೆ ಬಗ್ಗೆ ಯಾವುದೇ ರೀತಿಯ ವಾದ ವಿವಾದಗಳಿಗೆ ಆಸ್ಪದವಿರುವುದಿಲ್ಲ. ಎಲ್ಲಾ ರೀತಿಯ ನಿಯಂತ್ರಣಾಧಿಕಾರವನ್ನು ಪ್ರಾಧಿಕಾರ ಕಾಯ್ದಿರಿಸಿಕೊಂಡಿದೆ.

22 ಅಭ್ಯರ್ಥಿಗಳು ಪಡೆದಿರುವ ಶೇಕಡವಾರು ಅಂಕಗಳ ಆಧಾರದ ಹಾಗೂ ಮೀಸಲಾತಿ ಆಧಾರದ ಮೇಲೆ ಆಯ್ಕೆಯನ್ನು ಮಾಡಲಾಗುವುದು ಮತ್ತು ಸರ್ಕಾರದ ಆದೇಶದ ಸಂಖ್ಯೆ ಡಿಪಿಎಆರ್ 26 ಎಸ್‌ಬಿಸಿ 2002 ದಿನಾಂಕ 11.04.2003 ಮತ್ತು ಕಾಲಕಾಲಕ್ಕೆ ಆಗಿರುವ ತಿದ್ದುಪಡಿಗಳನ್ವಯ ಆಯ್ಕೆ ಮಾಡಲಾಗುವ ಸಂಖ್ಯೆಗೆ ಶೇ10 ರ ಅನುಪಾತದಲ್ಲಿ ಅಧಿಕ ಆಯ್ಕೆ ಪಟ್ಟಿಯನ್ನು ತಯಾರಿಸಿ ರಾಜ್ಯಪತ್ರದಲ್ಲಿ ಪ್ರಕಟಿಸಲಾಗುವುದು. ಮತ್ತು ಆಯ್ಕೆ ಹೊಂದಿದ ಅಭ್ಯರ್ಥಿಗಳ ಪಟ್ಟಿಯನ್ನು ಜಿಲ್ಲಾಧಿಕಾರಿಗಳ ಕಛೇರಿ, ಎಲ್ಲಾ ಉಪವಿಭಾಗಾಧಿಕಾರಿಗಳ ಕಛೇರಿಗಳು ಹಾಗೂ ಎಲ್ಲಾ ತಾಲ್ಲೂಕು ಕಛೇರಿಗಳ ಸೂಚನಾ ಫಲಕದಲ್ಲಿ ಪ್ರಚುರ ಪಡಿಸಲಾಗುವುದು .

23 ಆಯ್ಕೆ ಪಟ್ಟಿಯಲ್ಲಿ ಕಂಡುಬರುವ ಅಭ್ಯರ್ಥಿಗಳು ನೇಮಕಾತಿಯನ್ನು ಹಕ್ಕು ಎಂದು ಪರಿಗಣಿಸುವಂತಿಲ್ಲ.

24 ನೇಮಕಾತಿ ಆದೇಶವನ್ನು ಪಡೆದ ಅಭ್ಯರ್ಥಿಗಳು ನೇಮಕಾತಿ ಆದೇಶದಲ್ಲಿ ತಿಳಿಸಿದ ನಿಗದಿತ ಅವಧಿಯ ಒಳಗೆ ಕರ್ತವ್ಯದ ಮೇಲೆ ಹಾಜರಾಗದಿದ್ದಲ್ಲಿ ಸದರಿ ಹುದ್ದೆಗಳನ್ನು ಅಧಿಕ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಂದ ತುಂಬಲಾಗುವುದು.

25 ಅಭ್ಯರ್ಥಿಗಳು ಕಂಪ್ಯೂಟರ್ ಜ್ಞಾನ ಹೊಂದಿರುವುದು ಹೆಚ್ಚುವರಿ ಅರ್ಹತೆ ಎಂದು ಆದ್ಯತೆ ನೀಡಲಾಗುವುದು.

26 **ಈ ಕೆಳಕಂಡ ದಾಖಲಾತಿಗಳನ್ನು ಅರ್ಜಿಯ ಜೊತೆ ಲಗತ್ತಿಸಿರತಕ್ಕದ್ದು.**

a)ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಪಿ.ಯು.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿ.

b)ಜನ್ಮದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ(ಟಿ.ಸಿ)/ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ(Extract of Cumulative Record)

**ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು**

c)ಸೈನಿಕ ಸೇವೆಯಿಂದ ಬಿಡುಗಡೆಯಾದ /ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ

**ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೆ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯ ಅರ್ಜಿ ಸಲ್ಲಿಸುವುದು ಸೂಕ್ತ .

d)ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಪ್ರವರ್ಗ-2ಎ, ಪ್ರವರ್ಗ-2ಬಿ, ಪ್ರವರ್ಗ-3ಎ, ಪ್ರವರ್ಗ-3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್ ರವರಿಂದ ಪಡೆದಿರುವ ಪ್ರಮಾಣ ಪತ್ರ

e)ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ಭರ್ತಿ ಮಾಡಿ ನಿಗದಿತ ದಿನಾಂಕದೊಳಗೆ ನೇಮಕಾತಿ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

f) ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು ಸಂಬಂಧಿಸಿತ ನೇಮಕಾತಿ ಪ್ರಾಧಿಕಾರದಿಂದ ಭರ್ತಿ ಮಾಡಿ ನಿಗದಿತ ದಿನಾಂಕದೊಳಗೆ ಸಲ್ಲಿಸತಕ್ಕದ್ದು.

g)ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ-1 ಮತ್ತು 2 ರಲ್ಲಿ (ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯವರ್ಗದ ಅಭ್ಯರ್ಥಿಗಳು ನಮೂನೆ-2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ-1 ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಪಡೆದಿರತಕ್ಕದ್ದು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.)

h)ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ

i)ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತ ಕಾರ್ಮಿಕರು , ಗ್ರಾಮ ಸಮೂಹ ಪರಿಶೀಲಕರು ಮತ್ತು ಕ್ಯಾಡೆಟ್ ಪರಿವೀಕ್ಷಕರು ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

j) ನೇಮಕಾತಿ ಕೋರಿ ಅರ್ಜಿಸಲ್ಲಿಸುವ ಅರ್ಜಿದಾರರಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.

(ಈ ಮೇಲಿನ ಅರ್ಹತೆ, ಮೀಸಲಾತಿ ಇತ್ಯಾದಿಗಳನ್ನು ನೇಮಕಾತಿ ಪ್ರಾಧಿಕಾರ ಕೂಲಂಕುಷವಾಗಿ ಪರಿಶೀಲಿಸಿದ ನಂತರವೇ ಅಭ್ಯರ್ಥಿಗಳನ್ನು ಜೇಷ್ಠತೆ ಮತ್ತು ಮೀಸಲಾತಿ ಹಾಗೂ ಮೆರಿಟ್ ಆಧಾರದ ಮೇಲೆ ಪರಿಗಣಿಸಲಾಗುವುದು.)

27 **ಪ್ರಮುಖ ಸೂಚನೆಗಳು**

a) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

b) ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನು ಸ್ಕ್ಯಾನ್ ಮಾಡುವುದರಿಂದ ಅರ್ಜಿಗಳನ್ನು ಮಡಿಚಬಾರದು ಹಾಗೂ ಪಿನ್ ಮಾಡಬಾರದು ಮತ್ತು ಯಾವುದೇ ರೀತಿ ಹಾಳು ಮಾಡಬಾರದು

c) ಒಬ್ಬನೇ ಅಭ್ಯರ್ಥಿ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ ಯಾವುದಾದರೂ ಒಂದುಅರ್ಜಿಯನ್ನು ಮಾತ್ರ (ಕ್ರಮಬದ್ಧವಾಗಿದ್ದಲ್ಲಿ) ಪರಿಗಣಿಸಲಾಗುವುದು. ಈ ವಿಚಾರದಲ್ಲಿ ನೇಮಕಾತಿ ತೀರ್ಮಾನವೇ ಅಂತಿಮ. ಇದರಿಂದ ಅಭ್ಯರ್ಥಿಗಳಿಗೆ ಅನಾನುಕೂಲವಾದಲ್ಲಿ ನೇಮಕಾತಿ ಪ್ರಾಧಿಕಾರ ಹೊಣೆಯಾಗುವುದಿಲ್ಲ.

d) ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಡೆದಿರುವ ಮಾಹಿತಿ ವಿವರವನ್ನು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾಗುವವರೆಗೂ ಸುರಕ್ಷಿತವಾಗಿಟ್ಟುಕೊಳ್ಳತಕ್ಕದ್ದು. ಈ ಪುಸ್ತಕದಲ್ಲಿ ಅರ್ಜಿಯನ್ನು ಭರ್ತಿ ಮಾಡುವ ವಿಧಾನ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ (Horizontal & Vertical Reservations) ವಿಶ್ಲೇಷಣೆ ಇತ್ಯಾದಿ ವಿಷಯಗಳ ಬಗ್ಗೆ ಕೂಲಂಕುಷವಾಗಿ ವಿವರಿಸಿದ್ದು, ಅವುಗಳನ್ನು ಅಭ್ಯರ್ಥಿಗಳು ಗಮನವಿಟ್ಟು ಓದಿಕೊಳ್ಳತಕ್ಕದ್ದು.

e) ಅರ್ಜಿಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮದಿನಾಂಕ, ವಿದ್ಯಾರ್ಹತೆ, ಹಾಗೂ ವಯೋಮಿತಿ ಸಡಿಲಿಕೆ ಈ ಬಗ್ಗೆ ಆನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಕೋರಿಕೆಯನ್ನು ಪುರಸ್ಕರಿಸಲಾಗುವುದಿಲ್ಲ.

f) ನೇಮಕಾತಿ ಪ್ರಾಧಿಕಾರವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ.

g) **ದುರ್ನಡತೆ:-** ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಾಸ್ತಾವೇಜು ಅಥವಾ ತಿದ್ದಲಾದ ದಾಸ್ತಾವೇಜು ಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು/ಸುಳ್ಳು ಹೇಳಿಕೆ ನೀಡಿರುವನೆಂದು ತಿಳಿದು ಬಂದಲ್ಲಿ ಕ್ರಿಮಿನಲ್ ವ್ಯವಹಾರಗಳಿಗೆ ಒಳಪಡಿಸಲಾಗುತ್ತದೆ.

**ಡಾ|| ಸಿ. ಸೋಮಶೇಖರ**
ಜಿಲ್ಲಾಧಿಕಾರಿಗಳು, ಹಾಗೂ ಗ್ರಾಮಲೆಕ್ಕಿಗರ ನೇಮಕಾತಿ ಪ್ರಾಧಿಕಾರ
ತುಮಕೂರು ಜಿಲ್ಲೆ. ತುಮಕೂರು .

**ಕಂದಾಯ ಇಲಾಖೆ**

**ಅರ್ಜಿ ಸಂಖ್ಯೆ:**

ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ
ಹಾಗೂ ನೇರ ನೇಮಕಾತಿ ಪ್ರಾಧಿಕಾರ
ತುಮಕೂರು

ಇತ್ತೀಚಿನ ಅಭ್ಯರ್ಥಿಯ
ಬಣ್ಣದ ಪಾಸ್ ಪೋರ್ಟ್
ಅಳತೆಯ ಭಾವಚಿತ್ರ
ಲಗತ್ತಿಸುವುದು

-ಇವರಿಗೆ.

**ಗ್ರಾಮ ಲೆಕ್ಕಿಗರ ಹುದ್ದೆಗೆ ಅರ್ಜಿ**

**ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 30.03.2009**

| | | |
|---|---|---|
| 1 | ಅಭ್ಯರ್ಥಿಯ ಹೆಸರು | |
| 2 | ತಂದೆ/ಗಂಡನ ಹೆಸರು | |
| 3 | ವಿಳಾಸ.(ಪತ್ರ ವ್ಯವಹಾರಕ್ಕಾಗಿ) | ಖಾಯಂ ವಿಳಾಸ |
| 4 | ದೂರವಾಣಿ ಸಂಖ್ಯೆ: | ಮೊಬೈಲ್ ಸಂಖ್ಯೆ: |
| 5 | ಧರ್ಮ:ಜಾತಿ | |
| 6 | ಲಿಂಗ (ಟಿಕ್ ಮಾರ್ಕ್ ಮಾಡುವುದು) | ಗಂಡು ☐ ಹೆಣ್ಣು ☐ |
| 7 | ಯಾವ ವರ್ಗಕ್ಕೆ ಸೇರಿರುವಿರಿ ( ಪ.ಜಾ) (ಪ.ಪಂ) ವರ್ಗ 1, 2(ಎ), 2(ಬಿ), 3(ಎ), 3(ಬಿ) | |
| 8 | ಮೀಸಲಾತಿ<br>ಗ್ರಾಮೀಣ/ಕನ್ನಡ ಮಾದ್ಯಮ/ಮಾಜಿ ಸೈನಿಕ /ಯೋಜನಾ ನಿರಾಶ್ರಿತರು/ಅಂಗವಿಕಲ.* | |
| 9 | ಹುಟ್ಟಿದ ದಿನಾಂಕ | ದಿನ / ತಿಂಗಳು / ವರ್ಷ |
| 10 | ವಯಸ್ಸು | |

| | | | | | | |
|---|---|---|---|---|---|---|
| 11 | ವಿದ್ಯಾರ್ಹತೆ **<br>ಪಿ.ಯು.ಸಿ | ಶೈಕ್ಷಣಿಕ ವರ್ಷ | ಒಟ್ಟು ಅಂಕ | ಪಡೆದ ಅಂಕ | ಶೇಕಡ (%) | ತೇರ್ಗಡೆ ಯಾದವರ್ಷ |
| 12 | ಅರ್ಜಿ ಶುಲ್ಕ | ಪ.ಜಾ/ಪ.ಪಂ/ಮಾಜಿಸೈನಿಕರು/ಪ್ರವರ್ಗ1 | | | | ಇತರೆ |
| 13 | ಶುಲ್ಕ ಪಾವತಿಸಿದ ವಿವರ | ಡಿ.ಡಿ.ನಂ | | ದಿನಾಂಕ | | ಮೊತ್ತ |
| **14** | **ಅರ್ಜಿಯನ್ನು ಪಡೆಯಲು ಕೊನೆಯ ದಿನಾಂಕ** | **30.03.2009** | | | | |
| | * ಚಾಲ್ತಿಯಲ್ಲಿರುವ ಸರ್ಕಾರಿ ಆದೇಶದಂತೆ ಸಂಭಂದಪಟ್ಟ ಪ್ರಾಧಿಕಾರದಿಂದ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ದೊಳಗೆ ಪಡೆದ ಪ್ರಮಾಣ ಪತ್ರದ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸುವುದು. | | | | | |

** ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳ ದೃಡೀಕೃತ ಜೆರಾಕ್ಸ್ ಪ್ರತಿ ಲಗತ್ತಿಸುವುದು

**ಘೋಷಣೆ**

ಈ ಮೇಲೆ ವಿವರಿಸಿರುವ ಎಲ್ಲಾ ಮಾಹಿತಿಗಳು ನನಗೆ ತಿಳಿದಿರುವಂತೆ ಸತ್ಯವೆಂದು ಮತ್ತು ಸಂಪೂರ್ಣವೆಂದು ಪ್ರಮಾಣೀಕರಿಸುತ್ತೇನೆ. ಹಾಗೂ ಗ್ರಾಮ ಲೆಕ್ಕಿಗರಾಗಿ ಕಾರ್ಯ ನಿರ್ವಹಿಸಲು ವಿಧಿಸುವ ಎಲ್ಲಾ ಷರತ್ತು ಮತ್ತು ನಿಭಂದನೆಗಳಿಗೆ ಬದ್ದರಾಗಿರುವುದಾಗಿಯೂ ಸಹ ಪ್ರಮಾಣೀಕರಿಸುತ್ತೇನೆ.

ಸ್ಥಳ: . . . . . . . . . . . . . . . . .

ದಿನಾಂಕ: (ಅಭ್ಯರ್ಥಿಯ ಸಹಿ)

**ರಾಜ್ಯ ಸರ್ಕಾರಿ / ಕೇಂದ್ರ ಸರ್ಕಾರಿ ನೌಕರರು ಒದಗಿಸಬೇಕಾದ ಪ್ರಮಾಣ ಪತ್ರ**

ಶ್ರೀ/ ಶ್ರೀಮತಿ ________________________________________________ರವರು ರಾಜ್ಯ /ಕೇಂದ್ರ ಸರ್ಕಾರದಲ್ಲಿ ________________(ಪದನಾಮ)____________________ಇಲಾಖೆ ಯಲ್ಲಿ ಖಾಯಂ/ ತಾತ್ಕಾಲಿಕ ಹುದ್ದೆಯನ್ನು ದಿನಾಂಕ _______________ ರವರೆಗೆ ಹೊಂದಿರುವರು ಈ ಹುದ್ದೆಗೆ ಇವರು ನೇಮಕಾತಿ ನಿಯಮಗಳಡಿ ಆಯ್ಕೆಯಾಗಿದ್ದು, ಸದರಿ ಹುದ್ದೆಗೆ ಅರ್ಜಿ ಸಲ್ಲಿಸಲು ಅವರಿಗೆ ಅನುಮತಿ ನೀಡಲಾಗಿದೆ.

ನೇಮಕಾತಿ ಪ್ರಾಧಿಕಾರದ ಸಹಿ

ಸ್ಥಳ: ಇಲಾಖೆಯ ಹೆಸರು ಮತ್ತು ಮೊಹರಿನೊಂದಿಗೆ

ದಿನಾಂಕ:

**ಅರ್ಜಿಯೊಂದಿಗೆ ಲಗತ್ತಿಸಲಾದ ಗ್ರಾಮಲೆಕ್ಕಿಗರ ನೇರ ನೇಮಕಾತಿ ಮಾಹಿತಿ ವಿವರಗಳು**

**ನಿಬಂಧನೆಗಳು**

1 ಈ ನೇಮಕಾತಿಯು ಗ್ರಾಮ ಲೆಕ್ಕಿಗರ ಹುದ್ದೆಗೆ ಮಾತ್ರ. ಅನ್ವಯಿಸುತ್ತದೆ.

2 ಅರ್ಜಿ ಶುಲ್ಕವನ್ನು ಪ.ಜಾ/ಪ.ಪಂ/ಮಾಜಿಸೈನಿಕರು/ಪ್ರವರ್ಗ1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ 100/- ರೂ ಹಾಗೂ ಇತರೆ ಅಭ್ಯರ್ಥಿಗಳಿಗೆ 200/- ರೂಪಾಯಿಗಳು. ಅಭ್ಯರ್ಥಿಗಳು ಅರ್ಜಿಯನ್ನು ಪಡೆಯುವ ವೇಳೆ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ, ತುಮಕೂರು ಇವರ ಹೆಸರಿಗೆ ಖರೀದಿಸಲಾದ ಡಿ.ಡಿ ಯನ್ನು ಸಲ್ಲಿಸಿ ಅರ್ಜಿಯನ್ನು ಪಡೆಯಬಹುದು.

**3 ಅರ್ಜಿ ಮಾರಾಟದ ಕೊನೆಯ ದಿನಾಂಕ 26.03.2009.**

4 ಅರ್ಜಿ ನಿಗಧಿತ ನಮೂನಯು ಮೂಲ ಪ್ರತಿಯಲ್ಲಿಯೇ ಇರಬೇಕು. ಜಿಲ್ಲಾಧಿಕಾರಿಗಳು, ತುಮಕೂರು ಇವರ ಕಛೇರಿಯಿಂದಲೇ ಪಡೆಯ ಬೇಕು. (ಜೆರಾಕ್ಸ್ ಅರ್ಜಿ ಸಲ್ಲಿಸುವಂತಿಲ್ಲ)

5 ಆಯ್ಕೆ ದಿನಾಂಕದಂದು ತುಮಕೂರು ಜಿಲ್ಲೆಯಲ್ಲಿರುವ ಗ್ರಾಮ ಲೆಕ್ಕಿಗರ ಖಾಲಿ ಇರುವ ಹುದ್ದೆಗಳಿಗೆ, ರೋಸ್ಟರ್ ಮತ್ತು ಮೆರಿಟ್ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

6 ನೇಮಕಾತಿ ಸಮಿತಿಯ ಮೂಲಕ ಮಾತ್ರ ಈ ನೇಮಕಾತಿ ಪ್ರಕ್ರಿಯೆ ನಡೆಯುತ್ತಿದ್ದು, ಯಾವುದೇ ವ್ಯಕ್ತಿ ಗಳ ಅಥವಾ ಸಂಸ್ಥೆಗಳ ಆಸೆ ಆಮಿಷಗಳಿಗೆ ಒಳಗಾಗದಿರಲು ತಿಳುವಳಿಕೆ ನೀಡಿದೆ.

7 ಸರ್ಕಾರಿ ರಜಾ ದಿನಗಳಂದು ಅರ್ಜಿ ನೀಡಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ.

8 ಭರ್ತಿ ಮಾಡಿದ ಅರ್ಜಿಗಳನ್ನು ಯಾವುದೇಕಾರಣಕ್ಕೂ ಅಂಚೆ ಮೂಲಕವಾಗಲಿ ಅಥವಾ ಕೊರಿಯರ್ ಮೂಲಕವಾಗಲಿ ಕಳುಹಿಸಬಾರದು.

9 ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ.

10 ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆಯನ್ನು ಹೊಂದಿರಬೇಕು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲಿನ ನಿಗದಿತ ವಿದ್ಯಾರ್ಹತೆಯ ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ.)

11 ಹುದ್ದೆಗಳ ವರ್ಗೀಕರಣ ಈ ರೀತಿ ಇರುತ್ತವೆ.

| ಕ್ರ. ಸಂ | ಮೀಸಲಾತಿ | ಇತರೆ | ಕನ್ನಡ ಮಾಧ್ಯಮ | ಮಹಿಳೆ | ಯೋಜನಾ ನಿರಾಶ್ರಿತರು | ಗ್ರಾಮೀಣ | ಮಾಜಿ ಸೈನಿಕ | ಅಂಗವಿಕಲ | ಒಟ್ಟು |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಪ.ಜಾ | 3 | - | 1 | - | 5 | - | 1 | 10 |
| 2 | ಪ.ಪಂ | - | - | - | - | 1 | - | 1 | 2 |
| 3 | ಪ್ರ.1 | 1 | - | 1 | 1 | - | - | - | 3 |
| 4 | ಪ್ರ-2(ಎ) | 3 | - | 3 | 1 | 3 | - | - | 10 |
| 5 | ಪ್ರ-2(ಬಿ) | 2 | - | 1 | - | - | - | - | 3 |
| 6 | ಪ್ರ-3(ಎ) | 1 | - | - | 1 | - | - | - | 2 |
| 7 | ಪ್ರ-3(ಬಿ) | - | - | - | - | 1 | - | 1 | 2 |
| 8 | ಸಾಮಾನ್ಯ | 4 | 3 | 13 | - | 6 | 6 | - | 32 |
| | **ಒಟ್ಟು** | **14** | **3** | **19** | **3** | **16** | **6** | **3** | **64** |

12 **<u>ವೇತನ ಶ್ರೇಣಿಃ ಗ್ರಾಮಲೆಕ್ಕಿಗರು</u>**

ರೂ. 5800-100-6000-125-6500-150-7100-175-7800-200-8600-225-9500-250-10500

13 **ವಯೋಮಿತಿಃ** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) ಕನಿಷ್ಟ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ) ಗರಿಷ್ಟ ವಯೋಮಿತಿ.

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪ.ಜಾತಿ/ಪ.ಪಂಗಡ ಪ್ರ-1 | 40 ವರ್ಷ |
| ವಿಧವೆಯರು, ಅಂಗವಿಕಲರು | ಚಾಲ್ತಿಯಲ್ಲಿ ನಿಗದಿಪಡಿಸಿರುವ ವಯೋಮಿತಿಗೆ 10 ವರ್ಷ ಹೆಚ್ಚಿಗೆ ಸೇರಿಸಿಕೊಳ್ಳಲಾಗುವುದು. |
| ಮಾಜಿ ಸೈನಿಕರು | ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. |

14 ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು/ಚಾಲ್ತಿಯಲ್ಲಿರಬೇಕು. ನಂತರ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

15 ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಸಂಬಂಧ ಪಟ್ಟ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು.

16 ಗ್ರಾಮೀಣ ಮೀಸಲಾತಿಯನ್ನು ಕೋರಿರುವ ಪ.ಜಾತಿ/ಪ.ಪಂ/ಪ್ರವರ್ಗ1, 2ಎ, 2ಬಿ,3ಎ, 3ಬಿ, ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ -2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

17 ಯೋಜನೆಗಳಿಂದ ನಿರ್ವಸತಿಗರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಪಡೆದಿರಬೇಕು.

18 ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ ವರ್ಗಾವಣೆಯ ಪ್ರಮಾಣ ಪತ್ರದ ಉಧೃತಭಾಗವನ್ನು (Extract of Cummulative record) ಲಗತ್ತಿಸತಕ್ಕದ್ದು. ಈ ದಾಖಲೆಗಳಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ನೇಮಕಾತಿ ಪ್ರಾಧಿಕಾರ ಪರಿಗಣಿಸುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

19 ಪ.ಜಾತಿ/ಪ.ಪಂ./ ಪ್ರವರ್ಗ-1, ಪ್ರವರ್ಗ-2ಎ, ಪ್ರವರ್ಗ 3ಎ, ಪ್ರವರ್ಗ-3ಬಿ, ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್/ ನಲ್ಲಿ ತಹಶೀಲ್ದಾರ್ ರವರಿಂದ ಪಡೆದಿರುವ ಪ್ರಮಾಣ ಪತ್ರದ ಪ್ರತಿ ಲಗತ್ತಿಸತಕ್ಕದ್ದು. ಜಾತಿ ಅಡಿಯಲ್ಲಿ ಆಯ್ಕೆಯಾಗುವ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು(ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

20 ನೇಮಕಾತಿ ಪ್ರಾಧಿಕಾರದ ತೀರ್ಮಾನವೇ ಅಂತಿಮ. ಇದರಿಂದ ಅಭ್ಯರ್ಥಿಗಳಿಗೆ ಅನಾನುಕೂಲವಾದಲ್ಲಿ ಪ್ರಾಧಿಕಾರವು ಹೊಣೆಯಾಗುವುದಿಲ್ಲ.

21 ನೇಮಕಾತಿ ಪ್ರಕ್ರಿಯೆ ಬಗ್ಗೆ ಯಾವುದೇ ರೀತಿಯ ವಾದ ವಿವಾದಗಳಿಗೆ ಆಸ್ಪದವಿರುವುದಿಲ್ಲ. ಎಲ್ಲಾ ರೀತಿಯ ನಿಯಂತ್ರಣಾಧಿಕಾರವನ್ನು ಪ್ರಾಧಿಕಾರ ಕಾಯ್ದಿರಿಸಿಕೊಂಡಿದೆ.

22 ಅಭ್ಯರ್ಥಿಗಳು ಪಡೆದಿರುವ ಶೇಕಡವಾರು ಅಂಕಗಳ ಆಧಾರದ ಹಾಗೂ ಮೀಸಲಾತಿ ಆಧಾರದ ಮೇಲೆ ಆಯ್ಕೆಯನ್ನು ಮಾಡಲಾಗುವುದು ಮತ್ತು ಸರ್ಕಾರದ ಆದೇಶದ ಸಂಖ್ಯೆ ಡಿಪಿಎಆರ್26ಎಸ್‌ಬಿಸಿ 2002 ದಿನಾಂಕ 11.04.2003 ಮತ್ತು ಕಾಲಕಾಲಕ್ಕೆ ಆಗಿರುವ ತಿದ್ದುಪಡಿಗಳನ್ವಯ ಆಯ್ಕೆ ಮಾಡಲಾಗುವ ಸಂಖ್ಯೆಗೆ ಶೇ10 ರ ಅನುಪಾತದಲ್ಲಿ ಅಧಿಕ ಆಯ್ಕೆ ಪಟ್ಟಿಯನ್ನು ತಯಾರಿಸಿ ರಾಜ್ಯಪತ್ರದಲ್ಲಿ ಪ್ರಕಟಿಸಲಾಗುವುದು . ಮತ್ತು ಆಯ್ಕೆ ಹೊಂದಿದ ಅಭ್ಯರ್ಥಿಗಳ ಪಟ್ಟಿಯನ್ನು ಜಿಲ್ಲಾಧಿಕಾರಿಗಳ ಕಛೇರಿ , ಎಲ್ಲಾ ಉಪವಿಭಾಗಾಧಿಕಾರಿಗಳ ಕಛೇರಿಗಳು ಹಾಗೂ ಎಲ್ಲಾ ತಾಲ್ಲೂಕು ಕಛೇರಿಗಳ ಸೂಚನಾ ಫಲಕದಲ್ಲಿ ಪ್ರಚುರ ಪಡಿಸಲಾಗುವುದು .

23 ಆಯ್ಕೆ ಪಟ್ಟಿಯಲ್ಲಿ ಕಂಡುಬರುವ ಅಭ್ಯರ್ಥಿಗಳು ನೇಮಕಾತಿಯನ್ನು ಹಕ್ಕು ಎಂದು ಪರಿಗಣಿಸುವಂತಿಲ್ಲ.

24 ನೇಮಕಾತಿ ಆದೇಶವನ್ನು ಪಡೆದ ಅಭ್ಯರ್ಥಿಗಳು ನೇಮಕಾತಿ ಆದೇಶದಲ್ಲಿ ತಿಳಿಸಿದ ನಿಗದಿತ ಅವಧಿಯ ಒಳಗೆ ಕರ್ತವ್ಯದ ಮೇಲೆ ಹಾಜರಾಗದಿದ್ದಲ್ಲಿ ಸದರಿ ಹುದ್ದೆಗಳನ್ನು ಅಧಿಕ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಂದ ತುಂಬಲಾಗುವುದು.

25 ಅಭ್ಯರ್ಥಿಗಳು ಕಂಪ್ಯೂಟರ್ ಜ್ಞಾನ ಹೊಂದಿರುವುದು ಹೆಚ್ಚುವರಿ ಅರ್ಹತೆ ಎಂದು ಆಧ್ಯತೆ ನೀಡಲಾಗುವುದು.

26 **ಈ ಕೆಳಕಂಡ ದಾಖಲಾತಿಗಳನ್ನು ಅರ್ಜಿಯ ಜೊತೆ ಲಗತ್ತಿಸಿರತಕ್ಕದ್ದು.**

a)ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಪಿ.ಯು.ಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿ.

b)ಜನ್ಮದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ(ಟಿ.ಸಿ)/ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ(Extract of Cumulative Record)

**ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು**

c)ಸೈನಿಕ ಸೇವೆಯಿಂದ ಬಿಡುಗಡೆಯಾದ /ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ

**ಟಿಪ್ಪಣಿ:** ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಅ ಮೀಸಲಾತಿಗೆ ಅರ್ಹರೆ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯ ಅರ್ಜಿ ಸಲ್ಲಿಸುವುದು ಸೂಕ್ತ .

d)ಪರಿಶಿಷ್ಟ ಜಾತಿ , ಪರಿಶಿಷ್ಟ ಪಂಗಡ, ಪ್ರವರ್ಗ-1 , ಪ್ರವರ್ಗ-2ಎ, ಪ್ರವರ್ಗ-2ಬಿ, ಪ್ರವರ್ಗ-3ಎ, ಪ್ರವರ್ಗ-3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್ ರವರಿಂದ ಪಡೆದಿರುವ ಪ್ರಮಾಣ ಪತ್ರ

e)ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ಭರ್ತಿ ಮಾಡಿ ನಿಗದಿತ ದಿನಾಂಕದೊಳಗೆ ನೇಮಕಾತಿ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

f) ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು ಸಂಬಂಧಿಸಿತ ನೇಮಕಾತಿ ಪ್ರಾಧಿಕಾರದಿಂದ ಭರ್ತಿ ಮಾಡಿ ನಿಗದಿತ ದಿನಾಂಕದೊಳಗೆ ಸಲ್ಲಿಸತಕ್ಕದ್ದು.

g)ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ-1 ಮತ್ತು 2 ರಲ್ಲಿ (ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯವರ್ಗದ ಅಭ್ಯರ್ಥಿಗಳು ನಮೂನೆ-2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ-1 ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಪಡೆದಿರತಕ್ಕದ್ದು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.)

h) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ

i) ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತ ಕಾರ್ಮಿಕರು, ಗ್ರಾಮ ಸಮೂಹ ಪರಿಶೀಲಕರು ಮತ್ತು ಕ್ಯಾಡೆಟ್ ಪರಿವೀಕ್ಷಕರು ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

j) ನೇಮಕಾತಿ ಕೋರಿ ಅರ್ಜಿಸಲ್ಲಿಸುವ ಅರ್ಜಿದಾರರಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.

(ಈ ಮೇಲಿನ ಅರ್ಹತೆ, ಮೀಸಲಾತಿ ಇತ್ಯಾದಿಗಳನ್ನು ನೇಮಕಾತಿ ಪ್ರಾಧಿಕಾರ ಕೂಲಂಕುಷವಾಗಿ ಪರಿಶೀಲಿಸಿದ ನಂತರವೇ ಅಭ್ಯರ್ಥಿಗಳನ್ನು ಜೇಷ್ಠತೆ ಮತ್ತು ಮೀಸಲಾತಿ ಹಾಗೂ ಮೇರಿಟ್ ಆಧಾರದ ಮೇಲೆ ಪರಿಗಣಿಸಲಾಗುವುದು.)

**27 ಪ್ರಮುಖ ಸ್ರೂಚನೆಗಳು**

a) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

b) ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನು ಸ್ಕ್ಯಾನ್ ಮಾಡುವುದರಿಂದ ಅರ್ಜಿಗಳನ್ನು ಮಡಿಚಬಾರದು ಹಾಗೂ ಪಿನ್ ಮಾಡಬಾರದು ಮತ್ತು ಯಾವುದೇ ರೀತಿ ಹಾಳು ಮಾಡಬಾರದು

c) ಒಬ್ಬನೇ ಅಭ್ಯರ್ಥಿ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ ಯಾವುದಾದರೂ ಒಂದುಅರ್ಜಿಯನ್ನು ಮಾತ್ರ (ಕ್ರಮಬದ್ಧವಾಗಿದ್ದಲ್ಲಿ) ಪರಿಗಣಿಸಲಾಗುವುದು. ಈ ವಿಚಾರದಲ್ಲಿ ನೇಮಕಾತಿ ತೀರ್ಮಾನವೇ ಅಂತಿಮ. ಇದರಿಂದ ಅಭ್ಯರ್ಥಿಗಳಿಗೆ ಅನಾನುಕೂಲವಾದಲ್ಲಿ ನೇಮಕಾತಿ ಪ್ರಾಧಿಕಾರ ಹೊಣೆಯಾಗುವುದಿಲ್ಲ.

d) ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಡೆದಿರುವ ಮಾಹಿತಿ ವಿವರವನ್ನು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾಗುವವರೆಗೂ ಸುರಕ್ಷಿತವಾಗಿಟ್ಟುಕೊಳ್ಳತಕ್ಕದ್ದು. ಈ ಪುಸ್ತಕದಲ್ಲಿ ಅರ್ಜಿಯನ್ನು ಭರ್ತಿ ಮಾಡುವ ವಿಧಾನ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ(Horizontal & Vertical Reservations) ವಿಶ್ಲೇಷಣೆ ಇತ್ಯಾದಿ ವಿಷಯಗಳ ಬಗ್ಗೆ ಕೂಲಂಕುಷವಾಗಿ ವಿವರಿಸಿದ್ದು, ಅವುಗಳನ್ನು ಅಭ್ಯರ್ಥಿಗಳು ಗಮನವಿಟ್ಟು ಓದಿಕೊಳ್ಳತಕ್ಕದ್ದು.

e) ಅರ್ಜಿಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ , ಜನ್ಮದಿನಾಂಕ, ವಿದ್ಯಾರ್ಹತೆ, ಹಾಗೂ ವಯೋಮಿತಿ ಸಡಿಲಿಕೆ ಈ ಬಗ್ಗೆ ಆನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಕೋರಿಕೆಯನ್ನು ಪುರಸ್ಕರಿಸಲಾಗುವುದಿಲ್ಲ.

f) ನೇಮಕಾತಿ ಪ್ರಾಧಿಕಾರವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ.

g) **ದುರ್ನಡತೆ:-** ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಾಸ್ತಾವೇಜು ಅಥವಾ ತಿದ್ದಲಾದ ದಾಸ್ತಾವೇಜು ಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು/ಸುಳ್ಳು ಹೇಳಿಕೆ ನೀಡಿರುವನೆಂದು ತಿಳಿದು ಬಂದಲ್ಲಿ ಕ್ರಿಮಿನಲ್ ವ್ಯವಹಾರಗಳಿಗೆ ಒಳಪಡಿಸಲಾಗುತ್ತದೆ.

**ಡಾ|| ಸಿ. ಸೋಮಶೇಖರ**

ಪಿ.ಆರ್. 228

ಜಿಲ್ಲಾಧಿಕಾರಿಗಳು, ಹಾಗೂ ಗ್ರಾಮಲೆಕ್ಕಿಗರ ನೇಮಕಾತಿ ಪ್ರಾಧಿಕಾರ

ತುಮಕೂರು ಜಿಲ್ಲೆ. ತುಮಕೂರು .

**MYSORE URBAN DEVELOPMENT AUTHORITY, MYSORE.**

**No.MUDA/PB/TN/ 19 /2008-09, DATE: 25th February 2009**

**INVITATION FOR TENDERS (SHORT TERM)**

**ONLY THROUGH E – TENDERING**

| Sl. No | Calendar of Events | Date & Time |
|---|---|---|
| 1. | Commencement of Registration and issue of Electronic Bid Sheets | 13.03.2009 10.00 Hrs. IST |
| 2. | Last date & time for receipt of requisition for Electronic Bid Sheets | 02.04.2009 16.00 Hrs. IST |
| 3. | Last Date & time for receipt of Bids through Electronic Mode only. | 03.04.2009 16.00 Hrs. IST |
| 4. | Date & time of opening of Electronic Technical Bid | 04.04.2009 11.00 Hrs. IST |
| 5. | Pre bid meeting will be conducted | 21.03.2009 11.00 Hrs. IST |

1. The intended bidder/ Agency can obtain User ID, Password and e-mail ID on presenting the Pass book (Contractors Registration Book) and entries will be made in the pass book at the time of registering for User ID & Password. If the contractor is unable to collect the User ID & Password in person, the same may be obtained through a representative with an authorization letter duly attesting his signature along with production of Passbook. The pre bid meeting will be conducted at the Office of Superintending Engineer, MUDA, Mysore as stated in the calendar of Events.
2. The Blank Tender documents can be obtained through our website **http://www.tenderwizard.com** by clicking on MUDA, which will link to **http://www.tenderwizard.in/muda** where electronic tender form is provided.
3. After the confirmation of payment, Bidders/ Contractors can download e-tender form (tender document) by making payment of amount as shown in the table enclosed towards the cost of documents through Demand Draft in favour of The Commissioner, MUDA, Mysore.
4. Bidders/ Contractors can access tender documents on the website, fill them and submit the completed tender document into electronic tender on the website itself. EMD shall be paid only in the form Bankers Cheque / D.D in favour of **Commissioner, MUDA, Mysore** payable at Mysore**.** The scanned copy of the EMD shall be attached to the e-tender document, failing which the bid will not be considered. The original EMD document should be submitted to the Commissioner, MUDA, at the Office of the Superintending Engineer, MUDA, Mysore on or before **16.00 Hrs IST on 03.04.2009** failing which the tenders will be rejected.
5. Bidders/ Contractors should attach all the scanned copies of the certificates as required in Eligibility criteria.
6. Corrigendum / Addendum/ Corrections, if any, will be published in the website.
7. The Authority reserves the right to accept / reject any or all tenders without assigning any reasons.
8. The Tenders are invited as per the provisions of the **Karnataka Transparency in Public Procurement 2000** & Annexures thereon.
9. Further details of works can be obtained from the Office of the Superintending Engineer, MUDA, Mysore on all working days. Any help regarding the participation in tendering can be had from the help desk Number: 93425-56736 (Mr.Avinash, KEONICS, Mysore) & Number: 93415-54868 (Mr.Chahesh, KEONICS, Mysore).

**TABLE**

| SL. No | Name of work | Approximate value of work (Rs in Lakhs.) | Earnest Money Deposit (Rs in Lakhs.) | Cost of document (Rs.) inclusive of all taxes | Period of completion |
|---|---|---|---|---|---|
| 1 | Formation of Residential Sites and Infrastructure of Lalithadri Nagara, (North & South Zone), Mysore (2nd Call) | 4439.17 | 44.40 | 150000 | 11 Months |

Superintending Engineer,
Mysore Urban Development Authority, Mysore.

P.D. 37

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ**

**ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ**

**ಇ – ಗುತ್ತಿಗೆ ಪ್ರಕಟಣೆ**

**(ಅಲ್ಪಾವಧಿ)**

**ಎರಡನೇಯ ಕರೆ**

**ಸಂ.: ಹೆಆಕಾ:ರಾಹೆವಿ:ಕಾ:ಸಇಂ:ಎನ್ಐಟಿ:2008–09:1517, ದಿನಾಂಕ: 27ನೇ ಫೆಬ್ರವರಿ 2009**

ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ–2000 ರಂತೆ ದ್ವಿಲಕೋಟೆ ಪದ್ಧತಿಯಲ್ಲಿ ಗುತ್ತಿಗೆಯನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ 1ನೇ ದರ್ಜೆ ಗುತ್ತಿಗೆದಾರರು : ಎಂ.ಓ.ಎಸ್.ಆರ್.ಟಿ. ಅಂಡ್ ಹೆಚ್. ರವರಿಂದ ಅನುಮೋದಿತ ಸಂಸ್ಥೆಗಳಿಂದ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ. ರಾಹೆ–63ರ ಅಂಕೋಲಾ – ಗೂಟಿ ಭಾಗದ ಕಿ.ಮೀ. 0.00 ರಿಂದ 18.00 ರವರೆಗೆ ಐಆರ್‌ಕ್ಯೂಪಿ ಕೆಲಸ. ಈ ಕೆಲಸಕ್ಕಾಗಿ ಟೆಂಡರ್‌ಗೆ ಇಟ್ಟ ಮೊತ್ತ ರೂ. 10,92,82,784–00 ಇ.ಎಂ.ಡಿ. ರೂ. 21,90,000–00, ಪ್ರೀ–ಬಿಡ್ ಮೀಟಿಂಗ್ ದಿ: 07–03–2009 ರಂದು ಬೆಳಿಗ್ಗೆ 11–00 ಗಂಟೆಗೆ ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಕಚೇರಿಯಲ್ಲಿ ನಡೆಸಲಾಗುವುದು. ಇ–ಟೆಂಡರ್ ಸ್ವೀಕರಿಸುವ ದಿ: 09–03–2009ರ ಸಂಜೆ 16.00 ಗಂಟೆಯವರೆಗೆ ಮತ್ತು ತಾಂತ್ರಿಕ ಬಿಡ್ ತೆರೆಯುವ ದಿನಾಂಕ: 11–03–2009ರ ಸಂಜೆ 16.30 ಗಂಟೆಗೆ. ಆರ್ಥಿಕ ಬಿಡ್ ತೆರೆಯುವ ದಿ: 13.03.2009ರ ಬೆಳಿಗ್ಗೆ 11.00 ಗಂಟೆಗೆ. ವಿವರವಾದ ಟೆಂಡರ್ ಪ್ರಕಟಣೆ, ಷರತ್ತುಗಳ ಬಗ್ಗೆ ಇ–ಟೆಂಡರ್ ಬಗ್ಗೆ ತಿಳಿಯಲು ವೆಬ್‌ಸೈಟ್ http://eproc.karnataka.gov.in.

ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರ್,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ.

**PUBLIC WORKS & I.W.T. DEPARTMENT [National Highways]**

**Office of the Highway Administration & Executive Engineer, National Highway Divn., Karwar**

**e-TENDER NOTIFICATION**

**(SHORT TERM)**

**IInd Call**

**No.: HAE/NHDK/AE/IRQP 0.00-18.00/NIT/2008-09/1517, Dated: 27th February 2009**

The Highway Administration & Executive Engineer, National Highway Divn., Karwar on behalf of Governor of Karnataka, invites two cover bid system as per Karnataka Transparency in Public Procurement Act-2000 in duplicate from Class-I contractors registered in KPWD / M.O.S.R.T. & H. approved firms for the construction work of "Improvements to Riding Quality from km 0.00 to 18.00 of NH-63 (Ankola – Gooty Section)", The amount put to tender is Rs.:10,92,82,784-00, E.M.D. Rs.: 21,90,000-00. Pre-Bid meeting will be held on 07-03-2009 @ 11.00 hrs in the office of Highway Administration & Executive Engineer, National Highway Division, Karwar. Last date for receipt of tender 09-03-2009 upto 16.00 hrs. and opening of Technical Bid will be on 11-03-2009 @ 16.30 hrs, and opening of Financial Bid will be on 13-03-2009 @ 11-00 hrs. For detailed Notification, Conditions & e-tendering process can be obtained by logging on to **http://eproc.karnataka.gov.in** intending tenderers should contract e-governance portal

Highway Administration & Executive Engineer,
National Highway Divn., KARWAR.

P.R. 212

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲ ಸಾರಿಗೆ ಇಲಾಖೆ**
**ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ**
**ಇ – ಗುತ್ತಿಗೆ ಪ್ರಕಟಣೆ**
**(ಅಲ್ಪಾವಧಿ)**
**ಎರಡನೇ ಕರೆ**
**ಸಂ.: ಹೆಆಕಾ:ರಾಹೆವಿ:ಕಾ:ಸಇಂ:ಎನ್ಐಟಿ:2008–09:1518, ದಿನಾಂಕ: 27ನೇ ಫೆಬ್ರವರಿ 2009**

ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ–2000 ರಂತೆ ದ್ವಿಲಕೋಟೆ ಪದ್ಧತಿಯಲ್ಲಿ ಗುತ್ತಿಗೆಯನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ 1ನೇ ದರ್ಜೆ ಗುತ್ತಿಗೆದಾರರು : ಎಂ.ಓ.ಎಸ್.ಆರ್.ಟಿ. ಅಂಡ್ ಹೆಚ್. ರವರಿಂದ ಅನುಮೋದಿತ ಸಂಸ್ಥೆಗಳಿಂದ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ. ಕಾಮಗಾರಿ ಹೆಸರು 'ರಾಜ್ಯ ಹೆದ್ದಾರಿ 06 ಕಾರವಾರ– ಕೈಗಾ –ಇಳಕಲ ರಸ್ತೆಯ ಕಿಮೀ 26.00 ರಿಂದ 36.00 ರವರೆಗೆ ರಸ್ತೆ ಸುಧಾರಣೆ ಮಾಡುವುದು". ಈ ಕೆಲಸಕ್ಕಾಗಿ ಟೆಂಡರ್‌ಗೆ ಇಟ್ಟ ಮೊತ್ತ ರೂ. 1,89,29,217–00. ಇ.ಎಂ.ಡಿ. ರೂ. 2,85,000–00, ಪ್ರೀ–ಬಿಡ್ ಮೀಟಿಂಗ್ ದಿ: 07–03–2009 ರಂದು ಬೆಳಿಗ್ಗೆ 11–00 ಗಂಟೆಗೆ ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಕಚೇರಿಯಲ್ಲಿ ನಡೆಸಲಾಗುವುದು. ಇ–ಟೆಂಡರ್ ಸ್ವೀಕರಿಸುವ ದಿ: 09–03–2009ರ ಸಂಜೆ: 16.00 ಗಂಟೆಯವರೆಗೆ ಮತ್ತು ತಾಂತ್ರಿಕ ಬಿಡ್ ತೆರೆಯುವ ದಿನಾಂಕ: 11.03.2009ರ ಸಂಜೆ 16.30 ಗಂಟೆಗೆ ಆರ್ಥಿಕ ಬಿಡ್ ತೆರೆಯುವ ದಿ: 13.03.2009ರ ಬೆಳಿಗ್ಗೆ 11.00 ಗಂಟೆಗೆ. ವಿವರವಾದ ಟೆಂಡರ್ ಪ್ರಕಟಣೆ, ಷರತ್ತುಗಳ ಬಗ್ಗೆ ಇ–ಟೆಂಡರ್ ಬಗ್ಗೆ ತಿಳಿಯಲು ವೆಬ್‌ಸೈಟ್ http://eproc.karnataka.gov.in.

ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನೀಯರ್,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ.

**PUBLIC WORKS & I.W.T. DEPARTMENT [National Highways]**
**Office of the Highway Administration & Executive Engineer, National Highway Divn., Karwar**
**e-TENDER NOTIFICATION**
**(SHORT TERM)**
**IInd Call**
**No.: HAE/NHDK/AE/CRF-26-36/NIT/2008-09/1518, Dated: 27th February 2009**

The Highway Administration & Executive Engineer, National Highway Divn., Karwar on behalf of Governor of Karnataka, invites two cover bid system as per Karnataka Transparency in Public Procurement Act-2000 in duplicate from Class-I contractors registered in KPWD / M.O.S.R.T. & H. approved firms for the construction work of "Improvements to Karwar-Kaiga-Ilkal Road SH 06 from Km. 26.00 to 36.00 in Karwar Taluka". The amount put to tender is Rs.: 1,89,29,217-00 EMD Rs 2,85,000-00 Pre-Bid meeting will be held on 07-03-2009 @ 11.00 hrs in the office of Highway Administration & Executive Engineer, National Highway Division, Karwar. Last date for receipt of tender 09-03-2009 upto 16.00 hrs. and opening of Technical Bid will be on 11.03.2009 @ 16.30 hrs, and opening of Financial Bid will be on 13.03.2009 @ 11-00 hrs. For detailed Notification, Conditions & e-tendering process can be obtained by logging on to **http://eproc.karnataka.gov.in** intending tenderers should contract e-governance portal.

Highway Administration & Executive Engineer,
National Highway Divn., KARWAR.

P.R. 213

**WATER RESOURCES DEPARTMENT**
**(Minor Irrigation)**
**ಸಂಖ್ಯೆ: ಸನೀಇ 03 ಮಸಾವಿ 2009, ದಿನಾಂಕ: 11ನೇ ಫೆಬ್ರವರಿ 2009**
**STATE TENDER BULLETIN**

The details of the notices inviting the tender in respect of the Procurement requirements of different procurement entities to be published as a part of the State - Tender Bulletin for the 2nd week of Feb 2009. The details of the published Tender Notification may be obtained from the concerned Executive Engineers who has invited the Tender.

**V. GOVINDARAJ**
Deputy Secretary to Government
and State Tender Bulletin Officer
Water Resources Department (M.I.)

**ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)**
**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಹಾಸನ.**
**ಅಲ್ಪಾವಧಿ ಟೆಂಡರ್ ಪ್ರಕಟಣೆ (ದ್ವಿ–ಲಕೋಟೆ ಪದ್ಧತಿ)**
**ಟೆಂಡರ್ ಪ್ರಕಟಣೆ ಸಂಖ್ಯೆ: 20/2008–09 ದಿನಾಂಕ: 03ನೇ ಫೆಬ್ರವರಿ 2009.**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿಸಿದ ಮೊದಲನೆ ದರ್ಜೆ ಸಿವಿಲ್ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ನ್ನು ದ್ವಿ–ಲಕೋಟೆ ಪದ್ಧತಿಯಲ್ಲಿ ದ್ವಿ ಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅದ್ಯಾದೇಶ–1999, 2000 ಮತ್ತು ಆ್ಯಕ್ಟ್–2000ರ ಸ್ಟ್ಯಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–4ರ ಕಲಂ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ, ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ. ಲಗತ್ತಿಸಿರುವಂತೆ ಕೆಲಸದ ಅನುಭವವಿರುವ ಗುತ್ತಿಗೆದಾರರು ಭಾಗವಹಿಸಬಹುದು.

1. ಖಾಲಿ ಟೆಂಡರ್ ಫಾರಂ ಅನ್ನು ಅರ್ಜಿ ಪಡೆದು ವಿತರಿಸುವ ದಿನಾಂಕ : ದಿ:23–03–2009ರ ಸಂಜೆ 5.30 ಗಂಟೆಯವರೆಗೆ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ : 02–04–2009ರ ಸಂಜೆ 4.00 ಗಂಟೆಯವರೆಗೆ.

(ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಒಳಗೊಂಡಂತೆ)

**ಕಾಮಗಾರಿ ವಿವರಗಳು**

| ಕ್ರ. ಸಂ | ಕಾಮಗಾರಿಯ ಹೆಸರು | ಟೆಂಡರಿ ಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ (ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರಂನ ಬೆಲೆ (ಹಿಂದಿರುಗಿಸ ಲಾರದಂಥದ್ದು) ತೆರಿಗೆ ಸೇರಿ (ರೂ.ಲಕ್ಷಗಳಲ್ಲಿ) | ಗುತ್ತಿಗೆ ದಾರರ ದರ್ಜೆ | ಕಾಲಮಿತಿ ಮಳೆಗಾಲ ಹೊರತು ಪಡಿಸಿ |
|---|---|---|---|---|---|---|
| **1** | **2** | **3** | **4** | **5** | **6** | **7** |
| 1 | ಹಾಸನ ಜಿಲ್ಲೆ ಹೊಳೆನರಸೀಪುರ ತಾ: ಚಾಕೇನಹಳ್ಳಿ ಡ್ಯಾಂ ಅಭಿವೃದ್ಧಿ | 416.13 | 625000.00 | 25000.00 | 1ನೇ ದರ್ಜೆ | 18 ತಿಂಗಳು |
| 2. | ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ಅಯ್ಯನಕೆರೆ ಪುನರುಜ್ಜೀವನ | 364.40 | 547000.00 | 25000.00 | 1ನೇ ದರ್ಜೆ | 18 ತಿಂಗಳು |
| 3. | ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ತಾಲ್ಲೂಕು ಬಿಳೇಕಲ್ಲಳ್ಳಿ ರಂಗನಾಥಸ್ವಾಮಿ ದೇವಸ್ಥಾನದ ಹತ್ತಿರ ಹೊಸ ಕೆರೆ ನಿರ್ಮಾಣ | 149.20 | 223800.00 | 20000.00 | 1ನೇ ದರ್ಜೆ | 11 ತಿಂಗಳು |
| 4. | ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ತಾಲ್ಲೂಕು ಕೋಟೆ ಚಾನಲ್ ಅಭಿವೃದ್ಧಿ | 167.00 | 251000.00 | 20000.00 | 1ನೇ ದರ್ಜೆ | 11 ತಿಂಗಳು |

**ಅರ್ಜಿ ಸಲ್ಲಿಸುವ ವಿಧಾನ:**

ಗುತ್ತಿಗೆದಾರರು ಖಾಲಿ ಟೆಂಡರ್ ಫಾರ್ಮಗಳನ್ನು ಪಡೆಯಲು ಅರ್ಜಿ ಸಲ್ಲಿಸುವಾಗ ಖಾಲಿ ಟೆಂಡರ್ ಫಾರಂನ ಮೊತ್ತವನ್ನು ಡಿ.ಡಿ.ಯೊಂದಿಗೆ ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ಹಾಜರುಪಡಿಸಿ ಪರಿಶೀಲನೆಗೊಳಪಡಿಸಿ, ಅರ್ಜಿಯ ಜೊತೆಗೆ ನಕಲು ಪ್ರತಿಗಳನ್ನು ಲಗತ್ತಿಸುವುದು.

1. ಕೆ.ಪಿ.ಡಬ್ಲ್ಯೂಡಿ ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
2. ಇತ್ತೀಚಿನ ವರಮಾನ ತೆರಿಗೆಯ ಕ್ಲಿಯರನ್ಸ್ ಪ್ರಮಾಣ ಪತ್ರ.
3. ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆ ಕ್ಲಿಯರನ್ಸ್ ಪ್ರಮಾಣ ಪತ್ರ.

mail will be dispatched by registered/speed post on payment of an extra amount of Rs. 200-00. The Executive Engineer M.I.Division, Gulbarga, will not be held responsible for the postal delay if any, in the delivery of the documents or non-receipt of the same.

3 Tenders must be accompanied by earnest money deposit specified for the work in the table below. Earnest money deposit will have to be in any one of the forms as specified in the tender document and shall have to be valid for 45 days beyond the validity of the tender.

4 Tenders must be delivered to the 1) Chief Engineer, Minor Iirrigation (North) zone, BIJAPUR. (2) The Superintending Engineer, M.I.Circle, Gulbarga, and (3) the Executive Engineer, M. I. Division, Gulbarga, on or before 1.00 P.M. on 21-04-2009, and first cover tenders will be opened on the next working day at 11.00 A.M, in the presence of the tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.

5 A pre-tender meeting will be held on 18-04-2009 at 11.00 A.M. at the office of the Executive Engineer, M.I.Division, Gulbarga to clarify the issues if any, and to answer questions on any matter that may be raised at that stage as stated in clause 8.2 of "Instructions to Tenders'' of the tender document.

6 Other details can be seen in the tender documents.

**TABLE**

| Sl No. | Name of work. | Approximate value of work (Rs.in lakhs) | Earnest money deposit in (Rs), | Cost of Tender document. Including all Taxes in (Rs), | Period of completion (including mansoon) |
|---|---|---|---|---|---|
| 1 | 2 | 3 | 4 | 5 | 6 |
| 1 | Constn,of New M.I. Tank near Belamagi village in Aland Taluka, Gulbarga District.. | 489.00 | 7,33,500.00 | 30,0000.00 | 10 (Ten) Calendar Months. |

**KALAGI SHIVAPUTRA**
P.R. 216 Executive Engineer,
M.I.Division, Gulbarga.

**ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಸಿಬ್ಬಂದಿ [4] ಗ್ರಾಲೆ ಸಿಆರ್ 31/2008-09, ದಿನಾಂಕ : 28ನೇ ಫೆಬ್ರವರಿ 2009**

**ವಿಷಯ :** ಬೆಂಗಳೂರು ನಗರ ಜಿಲ್ಲಾ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಯನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 299 ಬಿಎಸ್‌ಸಿ 2006, ದಿನಾಂಕ : 4.2.2009.

ಬೆಂಗಳೂರು ನಗರ ಜಿಲ್ಲಾ ಕಂದಾಯ ಇಲಾಖಾ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ. ನೇಮಕಾತಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 299 ಬಿಎಸ್‌ಸಿ 2006, ದಿನಾಂಕ: 4.2.2009 ರನ್ವಯ ನೇಮಕಾತಿ ಮಾಡಲಾಗುವುದು ಮತ್ತು ಈ ಬಗ್ಗೆ ಹೆಚ್ಚಿನ ಮಾಹಿತಿಯನ್ನು http://revdept.kar.nic.in & prs://rev at Karnataka gov.in ವೆಬ್‌ಸೈಟ್ ಮೂಲಕ ಪಡೆಯಬಹುದು.

ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ನಿಗದಿತ ನಮೂನೆಯಲ್ಲಿ ಎಲ್ಲಾ ವಿವರಗಳೊಂದಿಗೆ ಅಧ್ಯಕ್ಷರು ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರಿಗೆ ದಿನಾಂಕ : 30.3.2009ರಂದು 5.00 ಗಂಟೆಯೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ

ಕಳುಹಿಸುವುದು. ಹುದ್ದೆಗಳ ಸಂಖ್ಯೆಯನ್ನು ಕಡಿಮೆ ಅಥವಾ ಹೆಚ್ಚು ಮಾಡುವುದಕ್ಕೆ ಜಿಲ್ಲಾಧಿಕಾರಿಗಳಿಗೆ ಮಾತ್ರ ಅಧಿಕಾರವಿರುತ್ತದೆ. ಅರ್ಜಿಗಳನ್ನು ಮುದ್ದಾಂ ಸ್ವೀಕರಿಸಲಾಗುವುದಿಲ್ಲ.

**ಹುದ್ದೆಗಳ ವಿವರ :**

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ | ವೇತನ ಶ್ರೇಣಿ |
|---|---|---|---|---|
| 1 | ಗ್ರಾಮಲೆಕ್ಕಿಗ | 47 | ಪಿಯುಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. | 5800–10500 |

**ವರ್ಗೀಕರಣ :**

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | | | | | | | | |
|---|---|---|---|---|---|---|---|---|---|---|---|
| | | | | ಇತರೆ | ಮಹಿಳೆ | ಗ್ರಾಮೀಣ | ಅಂ.ವಿ. | ಮಾ. ಸೈ. | ಕ.ಮಾ.ಅ. | ಯೋ.ನಿ.ಅ. | ಒಟ್ಟು |
| 1 | ಗ್ರಾಮ ಲೆಕ್ಕಿಗ | 47 | ಪ.ಜಾ. | 2 | 2 | 2 | 1 | – | – | – | 7 |
| 2 | | | ಪ.ಪಂ. | 1 | 1 | – | – | – | – | – | 2 |
| 3 | | | ಪ್ರ–1 | 1 | 1 | – | – | – | – | – | 2 |
| 4 | | | ಪ್ರ–2[ಎ] | 2 | 2 | 2 | 1 | – | – | – | 7 |
| 5 | | | ಪ್ರ–2[ಬಿ] | 1 | 1 | – | – | – | – | – | 2 |
| 6 | | | ಪ್ರ 3[ಎ] | 1 | 1 | – | – | – | – | – | 2 |
| 7 | | | ಪ್ರ–3[ಬಿ] | 1 | 1 | – | – | – | – | – | 2 |
| 8 | | | ಸಾ.ಅ | 5 | 7 | 6 | 1 | 2 | 1 | 1 | 23 |
| | | | | | | | | | | **ಒಟ್ಟು** | **47** |

1. ಮಾ.ಸೈ. : ಮಾಜಿ ಸೈನಿಕರು
2. ಕ.ಮಾ.ಅ. : ಕನ್ನಡ ಮಾಧ್ಯಮ ಅಭ್ಯರ್ಥಿ
3. ಯೋ.ನಿ.ಅ. : ಯೋಜನಾ ನಿರಾಶ್ರಿತರು ಅಭ್ಯರ್ಥಿ
4. ಅಂ. ವಿ. : ಅಂಗವಿಕಲ ಅಭ್ಯರ್ಥಿ

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು :**

1. ಅರ್ಜಿಗಳನ್ನು ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ ಕಳುಹಿಸತಕ್ಕದ್ದು ಖುದ್ದಾಗಿ ಸ್ವೀಕರಿಸಲಾಗುವುದಿಲ್ಲ.
2. ವಯೋಮಿತಿ : ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಕೆಳಕಂಡ ವಯೋಮಿತಿ ಹೊಂದಿರತಕ್ಕದ್ದು.

   ಪ.ಜಾ. / ಪ. ಪಂ ಪ್ರ ವರ್ಗ–1 : ಕನಿಷ್ಟ 18 ಗರಿಷ್ಟ 40
   ಹಿಂದುಳಿದ ವರ್ಗ : ಕನಿಷ್ಟ 18 ಗರಿಷ್ಟ 38
   ಸಾಮಾನ್ಯ ವರ್ಗ : ಕನಿಷ್ಟ 18 ಗರಿಷ್ಟ 35

   ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಟ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

   1. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
   2. ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು.
   3. ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.
3. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.
4. ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿ ಸಲ್ಲಿಸಬೇಕು. ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಛೇರಿಯ ವೆಬ್‌ಸೈಟ್ http :// Bangalore urban.nic.in / http://www.kar.nic.in ಯಿಂದ Download ಮಾಡಿ ಕೊಳ್ಳುವುದು. ಅರ್ಜಿಗಳನ್ನು ಜಿಲ್ಲಾಧಿಕಾರಿಗಳ ಕಛೇರಿಯಿಂದ ಒದಗಿಸಲಾಗುವುದಿಲ್ಲ. ಲಕೋಟೆಯ ಮೇಲೆ ಅರ್ಜಿ ಸಲ್ಲಿಸುವ ಹುದ್ದೆಯ ಹೆಸರು ನಮೂದಿಸಿರಬೇಕು.
5. ನಿಗದಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
6. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ನೇಮಕಾತಿ ಪ್ರಾಧಿಕಾರ / ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸುವುದು.
7. ಅಭ್ಯರ್ಥಿಯು ತನ್ನ ಇತ್ತೀಚಿನ ಭಾವಚಿತ್ರವೊಂದನ್ನು ಅರ್ಜಿಯ ಬಲಗಡೆ ಮೇಲ್ಭಾಗದಲ್ಲಿ ಅಂಟಿಸಬೇಕು.
8. ಅಭ್ಯರ್ಥಿಗಳು ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
9. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

10. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು [ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ] ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
11. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರುರವರು ಕಾಯ್ದಿರಿಸಿಕೊಂಡಿರುತ್ತಾರೆ.
12. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 / ಮಾಜಿ ಸೈನಿಕ ರೂ. 100/– ಹಾಗೂ ಇತರರಿಗೆ ರೂ. 300/–ಗಳಿಗೆ ಬ್ಯಾಂಕ್ ಡಿ.ಡಿ.ಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು ಮತ್ತು ಡಿ.ಡಿ.ಗಳನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಮಾತ್ರ ಖರೀದಿಸತಕ್ಕದ್ದು ಹಾಗೂ ಡಿ.ಡಿಯ ಹಿಂದೆ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು. ಡಿ.ಡಿ.ಗಳನ್ನು ಲಗತ್ತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
13. ಸಹಿ ಮಾಡದಿರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
14. ಆಯ್ಕೆಯನ್ನು ಅಭ್ಯರ್ಥಿಯ ಮೆರಿಟ್ ಆಧಾರದ ಮೇಲೆ ಮಾತ್ರ ಪರಿಗಣಿಸಲಾಗುವುದು.
15. ಅಂಚೆ ವಿಳಂಬಕ್ಕೆ ಜಿಲ್ಲಾಧಿಕಾರಿಗಳ ಕಛೇರಿಯು ಜವಾಬ್ದಾರರಾಗುವುದಿಲ್ಲ.
16. ಮೀಸಲಾತಿ ಕೋರುವ ಅಭ್ಯರ್ಥಿಗಳು ಮೀಸಲಾತಿ ಪ್ರಮಾಣ ಪತ್ರಗಳನ್ನು ಪಡೆದು ಲಗತ್ತಿಸಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು.

| | | |
|---|---|---|
| ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1<br>[ನಮೂನೆ–ಡಿ] [ನಮೂನೆ–ಇ] | : | ಸರ್ಕಾರದ ಅಧಿಸೂಚನೆ ಸಂಖ್ಯೆ : ಎಸ್‌ಡಬ್ಲ್ಯೂಡಿ 132 ಎಸ್ಎಡಿ 1997, ದಿನಾಂಕ : 8.2.2000. ಕ್ರಮವಾಗಿ ನಮೂನೆ 1 & 2 |
| ಪ್ರವರ್ಗ 2ಎ / 2ಬಿ / 3ಎ / 3ಬಿ<br>[ನಮೂನೆ–ಎಫ್] | : | ಸರ್ಕಾರದ ಅಧಿಸೂಚನೆ ಸಂಖ್ಯೆ : ಎಸ್‌ಡಬ್ಲ್ಯೂಡಿ 126 ಬಿಸಿಎ, ದಿನಾಂಕ : 13.12.200. [ಕರ್ನಾಟಕ ಅನುಸೂಚಿತ ಜಾತಿಗಳು / ಅನುಸೂಚಿತ ಬುಡಕಟ್ಟುಗಳು ಮತ್ತು ಹಿಂದುಳಿದ ವರ್ಗಗಳ [ನೇಮಕಾತಿ ಮುಂತಾದ ಮೀಸಲಾತಿ ತಿದ್ದುಪಡಿ] ನಿಯಮಗಳು 2000ರನ್ವಯ ನಮೂನೆ –3] |

**ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರಬೇಕು**

17. **ಯೋಜನೆ ನಿರಾಶ್ರಿತರ ಕುಟುಂಬದ ಅಭ್ಯರ್ಥಿಗಳು** : ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 71 ಸೇನೆನಿ 2001, ದಿನಾಂಕ : 24.10.2002ರನ್ವಯ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ. ಈ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಸೀಲ್ದಾರ್‌ರವರು ನೀಡಿದ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.
18. **ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು** : ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಮೃತಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.
19. **ಅಂಗವಿಕಲ ಕುಟುಂಬದ ಅಭ್ಯರ್ಥಿಗಳು :** ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 07 ಸೇಸ್ಥೆಅ 94, ದಿನಾಂಕ : 13.9.1995 ರಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿ ಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದು ಕೊಂಡಿರಬೇಕು.
20. **ಗ್ರಾಮೀಣ ಅಭ್ಯರ್ಥಿಗಳು :** ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು. ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಅಂತಯೇ ಗ್ರಾಮೀಣ ಮೀಸಲಾತಿ

ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ನಿಗದಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಂಡು ಅದರ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

21. **ಕನ್ನಡ ಮಾಧ್ಯಮ ಅಭ್ಯರ್ಥಿಗಳು :** ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 71 ಎಸ್‌ಆರ್‌ಆರ್ 2001. ದಿನಾಂಕ : 24.10.2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ [ಸಾಮಾನ್ಯ ನೇಮಕಾತಿ] ನಿಯಮಗಳು 1977ರ ನಿಯಮ [9] [1] [ಸಿ] ರನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.
22. **ಅರ್ಹತಾ ಷರತ್ತುಗಳು** :
    1. ಭಾರತೀಯ ನಾಗರೀಕನಾಗಿರತಕ್ಕದ್ದು.
    2. ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.
    3. ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ
    4. **ನಿಗದಿತ ಶೈಕ್ಷಣಿಕ ಅರ್ಹತೆಯಲ್ಲಿ ಅರ್ಜಿ ಸಲ್ಲಿಸುವ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.**
23. ಕೆಳಕಂಡ ದಾಖಲೆಗಳನ್ನು ಅರ್ಜಿಯ ಜೊತೆಗೆ ಲಗತ್ತಿಸಿದೆಯೇ ಎಂದು ಖಚಿತಪಡಿಸಿಕೊಳ್ಳುವುದು.

- ಹುದ್ದೆಗಳಿಗೆ ನಿಗದಿ ಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ / ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ.
- ನಿಗದಿ ಪಡಿಸಿದ ಶುಲ್ಕದ ಬಾಬ್ತು ಡಿಮ್ಯಾಂಡ್ ಡ್ರಾಫ್ಟ್.
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪತ್ರ / ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ದೃಢೀಕೃತ ಪತ್ರ.
- ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ [ಮಾಜಿ ಮೀಸಲಾತಿ ಕೋರಿದ್ದಲ್ಲಿ]
- ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1. ಪ್ರವರ್ಗ–2ಎ. ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿಗಳ ಪ್ರಮಾಣ ಪತ್ರಗಳು [ಮೀಸಲಾತಿ ಕೋರಿದ್ದಲ್ಲಿ]
- ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1ರಲ್ಲಿ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಸೀಲ್ದಾರ್‌ರವರಿಂದ ಪಡೆದಿರತಕ್ಕದ್ದು.
- ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ 2ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿರತಕ್ಕದ್ದು.
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ [ಮೀಸಲಾತಿ ಕೋರಿದ್ದಲ್ಲಿ]
- ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ [ಮೀಸಲಾತಿ ಕೋರಿದ್ದಲ್ಲಿ]
- ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ [ಮೀಸಲಾತಿ ಕೋರಿದ್ದಲ್ಲಿ]
- ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ

ಮೇಲ್ಕಂಡಂತೆ ನಿಗದಿಪಡಿಸಿದ ದಾಖಲೆಗಳನ್ನು ಸಲ್ಲಿಸದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

24. ಇತರೆ ಸೂಚನೆಗಳು :
    1. ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿದ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.
    2. ಅರ್ಜಿಗಳನ್ನು ಸ್ವೀಕರಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇಯ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
25. ಅಧಿಸೂಚನೆ ಹೊರಡಿಸಿದ ಹುದ್ದೆಗಳ ಸಂಖ್ಯೆ ಹೆಚ್ಚು ಅಥವಾ ಕಡಿಮೆ ವ್ಯತ್ಯಾಸಕ್ಕೆ ಒಳಪಟ್ಟಿರುತ್ತದೆ.

26. ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 52 ಎಸಿಆರ್ 99, ದಿನಾಂಕ : 29.11.2002ರನ್ವಯ ಅಂಗವಿಕಲರ ಹುದ್ದೆಗಳಿಗೆ ಅರ್ಜಿ ಸಲ್ಲಿಸಿರುವವರು Leprosy cured [ಕುಷ್ಠರೋಗ ದಿಂದ ಗುಣಮುಖರಾದವರು] ಹಾಗೂ Hearing Impaired Mentally Ill ಮಾನಸಿಕ ಅಸ್ವಸ್ಥತೆಯಿಂದ ಗುಣಮುಖರಾದವರು] ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

ಜಿಲ್ಲಾಧಿಕಾರಿಗಳು
ಬೆಂಗಳೂರು ಜಿಲ್ಲೆ, ಬೆಂಗಳೂರು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಗ್ರಾಮ ಲೆಕ್ಕಿಗರ ನೇರ ನೇಮಕಾತಿಗಾಗಿ ಅರ್ಜಿ ನಮೂನೆ**



ಅಧ್ಯಕ್ಷರು ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ,
ಹಾಗೂ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ,
ಕೆ. ಜಿ. ರಸ್ತೆ, ಬೆಂಗಳೂರು 560 009.

**ಪ್ರಕಟಣೆ ಸಂಖ್ಯೆ : ಸಿಬ್ಬಂದಿ [4] ಗ್ರಾಲೆ ಸಿಆರ್ 31/2008–09**

**ಜಾಹೀರಾತು ಹೊರಡಿಸಿದ ದಿನಾಂಕ : 28.2.2009**

**ಅರ್ಜಿ ಸಲ್ಲಿಸುತ್ತಿರುವ ಹುದ್ದೆಯ ಹೆಸರು : ಗ್ರಾಮ ಲೆಕ್ಕಿಗರು**

| ಡಿ. ಡಿ. ಪಡೆದ ಬ್ಯಾಂಕ್ ಹೆಸರು | ಸಂದಾಯ ಮಾಡಿದ ಮೊತ್ತ | ಡಿ.ಡಿ. ಸಂಖ್ಯೆ ಮತ್ತು ದಿನಾಂಕ |
|---|---|---|
| | | |

| | | | |
|---|---|---|---|
| 1. | ಅರ್ಜಿದಾರನ / ಳ ಪೂರ್ಣ ಹೆಸರು | : | |
| 2. | ತಂದೆ / ಗಂಡ / ಪೋಷಕರ ಹೆಸರು | : | |
| 3. | ಖಾಯಂ ವಿಳಾಸ | : | |
| 4. | ಅಂಚೆ ವಿಳಾಸ | : | |
| 5. | ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ | : | |
| 6. | ಲಿಂಗ : ಪುರುಷ / ಮಹಿಳೆ ಅನ್ವಯಿಸುವ ವೃತ್ತವನ್ನು ತುಂಬಿ | : | ಪುರುಷ : O ಮಹಿಳೆ : O |
| 7. | ಜನ್ಮ ದಿನಾಂಕ : [ಎಸ್.ಎಸ್.ಎಲ್.ಸಿ. ಅಂಕ ಪಟ್ಟಿಯಲಿರುವಂತೆ] | : | |

| | | | | | | | | | |
|---|---|---|---|---|---|---|---|---|---|
| 8. | 1. ಮೀಸಲಾತಿ ಕೋರಿದ್ದಲ್ಲಿ ಅನ್ವಯಿಸುವ ವೃತ್ತವನ್ನು ತುಂಬಿ [ದೃಡೀಕರಣ ಪತ್ರಗಳನ್ನು ಕಡ್ಡಾಯವಾಗಿ ಲಗತ್ತಿಸಬೇಕು] | | | | | | | | |
| | ಸಾ.ಅ. | ಪ.ಜಾ | ಪ.ಪಂ. | ಪ್ರ–1 | 2ಎ | 2ಬಿ | 3ಎ | 3ಬಿ | ಉಪಜಾತಿ ನಮೂದಿಸಬೇಕು |
| | O | O | O | O | O | O | O | O | |
| | 2. ಇತರೆ ಮೀಸಲಾತಿ | | | ಸೇವೆಯಲ್ಲಿ ರುವವರು | ಗ್ರಾಮೀಣ | ಕ.ಮಾ.ಅ. | ಅಂ.ವಿ. | ಯೋ.ನಿ.ಅ. | ಮಾ.ಸೈ. |
| | | | | | | | | | |

| | | | | | | | |
|---|---|---|---|---|---|---|---|
| 9. | ವಿದ್ಯಾರ್ಹತೆ | : | ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆ | | | | |
| | | | ಒಟ್ಟು ಅಂಕಗಳು | ಗಳಿಸಿದ ಅಂಕಗಳು | ಶೇಕಡ | ಪಾಸಾದ ವರ್ಷ | ಬೋರ್ಡ್ ಅಥವಾ ಸಂಸ್ಥೆಯ ಹೆಸರು |
| | | | | | | | |
| 10 | ನೀವು ಸರ್ಕಾರಿ ಸೇವೆಯಲ್ಲಿ ಇರುವಿರಾ [ಅನ್ವಯಿಸುವ ವೃತ್ತವನ್ನು ತುಂಬಿ : ಹೌದು O ಇಲ್ಲ : O | | | | | | |

| 11 | **ರಾಜ್ಯ ಸರ್ಕಾರಿ / ಕೇಂದ್ರ ಸರ್ಕಾರಿ ನೌಕರರು ಒದಗಿಸಬೇಕಾದ ಪ್ರಮಾಣ ಪತ್ರ**<br>ಶ್ರೀ / ಶ್ರೀಮತಿ ______________ ರವರು ರಾಜ್ಯ / ಕೇಂದ್ರ ಸರ್ಕಾರದಲ್ಲಿ ______________[ಪದನಾಮ] ______________ ಇಲಾಖೆಯಲ್ಲಿ ಖಾಯಂ / ತಾತ್ಕಾಲಿಕ ಹುದ್ದೆಯನ್ನು ದಿನಾಂಕ : __________ ರವರೆಗೆ ಹೊಂದಿರುವರು. ಈ ಹುದ್ದೆಗೆ ಇವರು ನೇಮಕಾತಿ ನಿಯಮಗಳಡಿ ಆಯ್ಕೆಯಾಗಿದ್ದು ಸದರಿ ಹುದ್ದೆಗೆ ಅರ್ಜಿ ಸಲ್ಲಿಸಲು ಅವರಿಗೆ ಅನುಮತಿ ನೀಡಲಾಗಿದೆ.<br>ಸ್ಥಳ : ನೇಮಕಾತಿ ಪ್ರಾಧಿಕಾರದ ಸಹಿ<br>ದಿನಾಂಕ : ಇಲಾಖೆಯ ಹೆಸರು ಮತ್ತು ಮೊಹರಿನೊಂದಿಗೆ |
|---|---|

ಈ ಮೇಲ್ಕಂಡ ಎಲ್ಲಾ ವಿವರಗಳು ಸತ್ಯವೆಂದು ಪ್ರಮಾಣೀಕರಿಸುತ್ತೇನೆ. ಸತ್ಯವಲ್ಲವೆಂದು ತಿಳಿದು ಬಂದಲ್ಲಿ ನನ್ನ ಅರ್ಜಿಯನ್ನು ತಿರಸ್ಕರಿಸಬಹುದು. ನನ್ನ ವಿರುದ್ಧ ಸಿವಿಲ್ / ಕ್ರಿಮಿನಲ್ ಮೊಕದ್ದಮೆ ಹೂಡಬಹುದು.

ಸ್ಥಳ :

ದಿನಾಂಕ : ಅರ್ಜಿದಾರನ / ಳ ಸಹಿ

ಪಿ.ಆರ್. 234

**ಸಹಕಾರ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ಸಇ 40 ಎಂಆರ್ಇ 2009, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2009**

ಶಿಕಾರಿಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಆಡಳಿತ ಕಛೇರಿ ಕಟ್ಟಡ ಕಾಮಗಾರಿಯ ಟೆಂಡರ್ ಬುಲೆಟೀನ್ ಪ್ರಕಟಣೆ ಸಂಖ್ಯೆ:ಸಇ 40 ಎಂಆರ್ಇ 2009 ದಿನಾಂಕ:16.02.2009 ರ 2ನೇ ಪುಟದ ಷರತ್ತುಗಳಲ್ಲಿ **"ಗುತ್ತಿಗೆದಾರರು ಇಎಂಡಿ ಮೊತ್ತ ರೂ.25,000/– ಗಳನ್ನು"** ಎಂದು ಇರುವುದನ್ನು **"ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂ ಮೊತ್ತ ರೂ.25,000/– ಗಳನ್ನು"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಫೈರೋಜಾ ಖಾನಂ**

ಪಿ.ಆರ್. 210 ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಹಾಸನ – 573 201.**

**ತಿದ್ದುಪಡಿ ಪ್ರಕಟಣೆ**

**ಸಂಖ್ಯೆ:ಕಾಪಾಇಂ/ಸನೀವಿಹಾ/ಪಿಬಿ/ರೈತರ ಪ್ಯಾಕೇಜ್/ಟೆಂಡರ್/2008–09, ದಿನಾಂಕ: 13ನೇ ಫೆಬ್ರವರಿ 2009**

**ವಿಷಯ:** ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು ಸ್ವೀಕರಿಸುವ ದಿನಾಂಕವನ್ನು ಬದಲಾಯಿಸುವ ಬಗ್ಗೆ.

**ಉಲ್ಲೇಖ:** ಈ ಕಛೇರಿಯ ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: 20/08–09, ದಿನಾಂಕ: 03.02.2009

ಉಲ್ಲೇಖಿತ ಪ್ರಕಟಣೆಯಲ್ಲಿ ಪ್ರಕಟವಾಗಿದ್ದ ಅಲ್ಪಾವಧಿ ಟೆಂಡರ್‌ನಲ್ಲಿ ಈ ಕೆಳಗಿನಂತೆ ದಿನಾಂಕವನ್ನು ಬದಲಾಯಿಸಿ ಪ್ರಕಟಿಸಲಾಗಿದೆ.

**ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ** **24.03.2009 ಸಂಜೆ 4.00 ಗಂಟೆ ವರೆಗೆ**

ಇನ್ನಿತರೇ ಷರತ್ತು ಮತ್ತು ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕಾರ್ಯಪಾಲಕ ಇಂಜಿನಿಯರ್,

ಸಣ್ಣ ನೀರಾವರಿ ವಿಭಾಗ, ಹಾಸನ.

**WATER RESOURCES DEPARTMENT (Minor Irrigation)**

**Office of the Executive Engineer, M.I.Division, Hassan**

**CORRIGENDUM**

**No: MID/HSN/PB/Tender-20/08-09, Dated: 13th February 2009**

**Sub:** Reg., change of date of receipt of filled Technical & Financial Bid.

**Ref:** This office short term tender notification No.20/08-09, Dated: 03.02.2009

With reference to above the following changes are made in the dates of short term tender.

**Date of receipt of filled Technical & Financial Bid** **Up to 4.00 PM on 24.-03-2009**

There is no changes in other conditions.

Executive Engineer,

P.R. 217 M.I. Division, Hassan.

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು–1.**

**ಟೆಂಡರ್ ಪ್ರಕಟಣೆ**

**ಸಂಖ್ಯೆ/ತೋಉನಿ/ಕಉ/ವಿ೨2/108/2008–09, ದಿನಾಂಕ: 24ನೇ ಫೆಬ್ರವರಿ 2009**

ಕಬ್ಬನ್ ಉದ್ಯಾನವನ ಪ್ರವೇಶ ದ್ವಾರಗಳು ಸೇರಿದಂತೆ ಕಬ್ಬನ್ ಉದ್ಯಾನವನದ ಆಂತರಿಕ ಸಂಪೂರ್ಣ ಭದ್ರತೆ ಸೇವೆಗಳಿಗಾಗಿ ಅಧಿಕೃತ ಸೆಕ್ಯೂರಿಟಿ ಏಜನ್ಸಿಯಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಈ ಮುಂದೆ ಸೂಚಿಸಿರುವ ಭದ್ರತೆ ಕೆಲಸವನ್ನು ನಿರ್ವಹಿಸಲು ಈ ಕಛೇರಿಯ ನಿಬಂಧನೆ ಮತ್ತು ಷರತ್ತುಗಳಿಗೆ ಒಪ್ಪಿದಲ್ಲಿ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸಬಹುದು, ಟೆಂಡರ್ ಫಾರಂಗಳನ್ನು ದಿನಾಂಕ: 21–03–2009 ರಿಂದ 24–03–2009 ವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಒಂದು ಫಾರಂಗೆ ರೂ.500=00 ಪಾವತಿ ಮಾಡಿ ಪಡೆಯಬಹುದು. ಭದ್ರತೆ ಸೇವೆಯನ್ನು 60 ಜನ ಸೆಕ್ಯೂರಿಟಿ ಸಿಬ್ಬಂದಿಯನ್ನು (ಒಂದು ಪಹರೆಗೆ 20 ಸಿಬ್ಬಂದಿಯಂತೆ 3 ಪಹರೆಗಳಲ್ಲಿ) ಆದೇಶ ನೀಡಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಮಾತ್ರ ಸೀಮಿತವಾಗಿರುತ್ತದೆ. ಸೀಲ್ಡ್ ಮಾಡಿದ ಟೆಂಡರ್‌ಗಳನ್ನು ದಿನಾಂಕ: 25–03–2009 ರಂದು ಸಂಜೆ 3.00 ಗಂಟೆಯ ಒಳಗೆ ಈ ಕಛೇರಿಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ದಿನಾಂಕ: 25–03–2009 ರಂದು ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

**ನಿರ್ವಹಿಸಬೇಕಾದ ಭದ್ರತೆ ಸೇವೆಗಳು:–**

1. ಕಬ್ಬನ್ ಉದ್ಯಾನವನದ ವಿವಿಧ ಸ್ಥಳಗಳಲ್ಲಿ ನಿರ್ವಹಿಸಲು ಸೂಚಿಸುವ ಭದ್ರತಾ ಸೇವೆಯ ಪ್ರದೇಶದ ವಿವರಗಳು:

| | |
|---|---|
| ಹಡ್ಸನ್ ಸರ್ಕಲ್ ದ್ವಾರ ಕ್ಯಾನ್‌ಬೆಡ್ Y.M.C.A. ಪ್ರದೇಶ ಕರಗದ ಕುಂಟೆ ಪ್ರದೇಶ. ರಿಂಗ್‌ವುಡ್ ವೃತ್ತ ಸೆಂಚುರಿ ಕ್ಲಬ್ ದ್ವಾರ ಗೋಪಾಲ ಗೌಡ ವೃತ್ತ. ಹೈಕೋರ್ಟ್ ಗೇಟ್ ಸಿದ್ದಲಿಂಗಯ್ಯ ಗೇಟ್, ಗಜೆಬೊ ಪ್ರದೇಶ. | ಹೈಕೋರ್ಟ್ ಮುಂಭಾಗ ಪ್ರದೇಶ ವಿಧಾನ ಸೌಧ ಮುಂಭಾಗ, ರಾಣಿಪಾರ್ಕ್ ಸರ್ಕಲ್ ದ್ವಾರ. P.N.T. ಸರ್ಕಲ್‌ದ್ವಾರ ತಾವರೆಕೊಳ ಪ್ರದೇಶ. ಕಬ್ಬನ್ ಪಾರ್ಕ್ ನರ್ಸರಿ ಹಾಗೂ ಕಛೇರಿ, ಪ್ರೆಸ್ ಕ್ಲಬ್ ಮುಂಭಾಗ, ಪೌಂಟೆನ್ ಸರ್ಕಲ್ ಬ್ಯಾಂಡ್ ಸ್ಟಾಂಡ್ ಪ್ರದೇಶ. ಗ್ರಂಥಾಲಯ ಪ್ರದೇಶ. |

2. ವರ್ಷದ 365 ದಿನಗಳಲ್ಲಿ 24 ಗಂಟೆಗಳ ಸುವರ್ಣ ಭದ್ರತಾ ಸೇವೆಯನ್ನು ಕಬ್ಬನ್ ಉದ್ಯಾನವನದಲ್ಲಿ ನಿರ್ವಹಿಸಬೇಕು. ಕಬ್ಬನ್ ಉದ್ಯಾವನದ ಮರ, ಗಿಡ, ಸಸಿಗಳು, ಎಲ್ಲಾ ಕಟ್ಟಡಗಳು, ತೋಟದಲ್ಲಿ ಸಾಮಾನು ಸರಂಜಾಮುಗಳು, ಕುಂಡಗಳು ಹಾಗೂ ವಿದ್ಯುತ್ ದೀಪಗಳು, ಕೊಳವೆ ಬಾವಿಗಳು, ಮೋಟಾರ್ ಪಂಪುಗಳು, ವಾಹನಗಳು ಇತ್ಯಾದಿಗಳನ್ನು ಸರ್ವತೋಮುಖವಾಗಿ ಭದ್ರತೆ ನೀಡಿ ರಕ್ಷಿಸುವ ಕಾರ್ಯನಿರ್ವಹಿಸಬೇಕು.
3. ಕಬ್ಬನ್ ಉದ್ಯಾನವನದಲ್ಲಿನ ಮರ, ಗಿಡ, ಸಸಿಗಳಿಗೆ ಹಾನಿ ಮಾಡುವುದು. ಮರ ಹತ್ತುವುದು, ಮರದ ಕೊಂಬೆಗಳಿಗೆ ಜೋತು ಬೀಳುವುದು, ಮರದ ಮೇಲೆ ಹೆಸರು ಕೆತ್ತುವುದು, ಸಸಿ ಹೂವುಗಳನ್ನು ಮತ್ತು ಕಾಯಿ ಹಣ್ಣು ಕೀಳುವುದು, ಕೊಂಬೆಗಳಿಗೆ ಉಯ್ಯಾಲೆ ಕಟ್ಟುವುದು ಇತ್ಯಾದಿ ಚಟುವಟಿಕೆಗಳನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಗಿಡಗಳು, ಸಸಿಗಳು, ಬೀಜಗಳನ್ನು, ಹುಲ್ಲು ಇತ್ಯಾದಿಯನ್ನು ಸಂಗ್ರಹಿಸುವುದಾಗಲೀ ಅಥವಾ ಕಬ್ಬನ್ ಉದ್ಯಾನವನ ಹೊರಗೆ ಅಧಿಕೃತ ಅನುಮತಿ ಪತ್ರ ಇಲ್ಲದೆ ಸಾಗಿಸುವುದನ್ನು ನಿರ್ಬಂಧಿಸಬೇಕು.
4. ಕಬ್ಬನ್ ಉದ್ಯಾನವನದ ಒಳಗೆ ಅನಧಿಕೃತವಾಗಿ ಸಾರ್ವಜನಿಕರಿಗೆ ಬೀಜಗಳು, ಗಿಡಗಳು ಹಾಗೂ ತಿಂಡಿ ತಿನಿಸುಗಳು ಇತರೆ ಯಾವುದೇ ವಸ್ತುಗಳು / ಪದಾರ್ಥಗಳನ್ನು ಇಲಾಖಾ ನೌಕರರೇ ಆಗಲಿ ಅಥವಾ ಸಾರ್ವಜನಿಕರೇ ಆಗಲಿ ಮಾರಾಟ ಮಾಡುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.
5. ಕಬ್ಬನ್ ಉದ್ಯಾನವನದ ಒಳಗೆ ಸರ್ಕಾರಿ ವಾಹನಗಳು ಮತ್ತು ಸರ್ಕಾರಿ ಕೆಲಸದ ಮೇಲೆ ಬರುವ ಖಾಸಗಿ ವಾಹನಗಳನ್ನು ಹೊರತುಪಡಿಸಿ ಖಾಸಗಿ ವಾಹನಗಳು ಪ್ರವೇಶ ಮಾಡುವುದು, ಕಬ್ಬನ್‌ಉದ್ಯಾನವನದ ಒಳಗೆ ಓಡಾಡುವುದು, ಎಲ್ಲೆಂದರಲ್ಲಿ ನಿಲುಗಡೆ ಮಾಡುವುದು, ದುರಸ್ಥಿಪಡಿಸುವುದು, ತೊಳೆಯುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.
6. ಕಬ್ಬನ್ ಉದ್ಯಾನವನದಲ್ಲಿರುವ ಕೊಳವೆ ಬಾವಿಗಳು, ವಿದ್ಯುತ್ ಮೋಟಾರ್ ಪಂಪ್‌ಗಳು, ವಿದ್ಯುತ್ ಪ್ಯಾನಲ್ ಬೋರ್ಡ್‌ಗಳು (ಕ್ಯೂಬಿಕಲ್ ಔಟ್‌ಡೋರ್ ಬಾಕ್ಸ್) ಸಸ್ಯಾಗಾರಗಳಲ್ಲಿ ವಿದ್ಯುತ್ ಮೋಟಾರ್‌ಗಳು ಮತ್ತು ಕಾರಂಜಿಗಳಿಗೆ ಅಳವಡಿಸಿದ ಚಾನಲ್ಸ್ ವಿದ್ಯುತ್ ಮೋಟಾರ್‌ಗಳು, ವಿದ್ಯುತ್ ಬಣ್ಣದ ದೀಪಗಳಿಗೆ ಮತ್ತು ಕುಡಿಯುವ ನೀರಿಗಾಗಿ
7. ಅಳವಡಿಸಿರುವ ವಾಟರ್ ಸ್ಟೋರೇಜ್ ಟ್ಯಾಂಕ್ (ಸಿಂಟೆಕ್ಸ್ ಟ್ಯಾಂಕ್‌ಗಳು) ಸಸ್ಯ ತೋಟದಲ್ಲಿ ಅಳವಡಿಸಿರುವ ವಾಲ್ವ್‌ಗಳು, ನೀರಿನ ಕೊಳಾಯಿಗಳು ಇತ್ಯಾದಿಗಳಿಗೆ ಹಾನಿ ಆಗದಂತೆ ಮತ್ತು ಕಳವು ಆಗದಂತೆ ಸಂರಕ್ಷಿಸಬೇಕು.
8. ಉದ್ಯಾನವನದಲ್ಲಿ ಅಳವಡಿಸಿರುವ ತುಂತುರು ನೀರಾವರಿ / ಹನಿ ನೀರಾವರಿ ಪದ್ಧತಿಯಲ್ಲಿ ಅಳವಡಿಸಿರುವ ಉಪಕರಣಗಳಿಗೆ, ಕೊಳವೆ ಬಾವಿಗಳಿಗೆ ಹಾನಿ ಆಗದಂತೆ ಅಥವಾ ಕಳವು ಆಗದಂತೆ ಸಂರಕ್ಷಿಸಬೇಕು.
9. ಕಬ್ಬನ್ ಉದ್ಯಾನವನದ ಒಳಗಿನ ವಿದ್ಯುತ್ ದೀಪಗಳನ್ನು ಹಾಗೂ ದ್ವಾರಗಳಲ್ಲಿನ ಅಲಂಕಾರಿಕ ವಿದ್ಯುತ್ ದೀಪಗಳಿಗೆ ವಿದ್ಯುತ್ ಕೇಬಲ್ಸ್, ಕಂಟ್ರೋಲ್ ಸ್ವಿಚ್ ಬೋರ್ಡ್‌ಗಳಿಗೆ ಹಾನಿ ಆಗುವುದನ್ನು ಅಥವಾ ಕಳ್ಳತನ ಆಗುವುದನ್ನು ತಡೆಗಟ್ಟಬೇಕು.

10. ಕಬ್ಬನ್ ಉದ್ಯಾನವನದಲ್ಲಿ ಪಕ್ಷಿಗಳನ್ನು ಹಿಡಿಯುವುದು ಮತ್ತು ಫೌಂಟನ್‌ಗಳಲ್ಲಿ ಮಣ್ಣು, ಕಲ್ಲು, ಪ್ಲಾಸ್ಟಿಕ್ ಎಸೆಯುವುದು, ವಿಗ್ರಹಗಳನ್ನು ಪ್ರತಿಷ್ಠಾಪಿಸುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.

11. ಕಬ್ಬನ್ ಉದ್ಯಾನವನದ ಒಳಗೆ ಒಣಗಿದ ಮರದ ಎಲೆ, ಹುಲ್ಲು, ಮರದ ರಂಬೆಗಳಿಗೆ ಕಾಗದ ಕಾಂಪೋಸ್ಟ, ಗುಂಡಿ ಇತ್ಯಾದಿಗಳಿಗೆ ಸಾರ್ವಜನಿಕರು / ದುಷ್ಕರ್ಮಿಗಳು ಬೆಂಕಿ ಹಚ್ಚದಂತೆ ಸಂಪೂರ್ಣವಾಗಿ ಎಚ್ಚರ ವಹಿಸಬೇಕು. ಆಕಸ್ಮಿಕವಾಗಿ ಬೆಂಕಿ ಬಿದ್ದಂತಹ ಸಮಯದಲ್ಲಿ ತಕ್ಷಣ ಫೈರ್ ಸರ್ವೀಸ್ ಹಾಗೂ ಈ ಕಛೇರಿಗೂ ವರದಿ ಮಾಡಬೇಕು.

12 ಕಬ್ಬನ್ ಉದ್ಯಾನವನದ ಒಳಗೆ ಪ್ರವಾಸಿಗರು / ಸಾರ್ವಜನಿಕರು ಯಾವ ಸಮಯದಲ್ಲಿ ಆಗಲಿ ಮಲ–ಮೂತ್ರ ವಿಸರ್ಜನೆ ಮಾಡುವುದನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಸಾಕಿದ/ಬೀದಿ ನಾಯಿಗಳನ್ನು ತರುವುದನ್ನು /ಬರುವುದನ್ನು ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ಅಳವಡಿಸಿರುವ ಮರದ ಸಿಮೆಂಟ್ /ಮೊಸಾಯಿಕ್ ಬೆಂಚುಗಳ ಮೇಲೆ ಮಲಗುವುದನ್ನು ಮತ್ತು ವ್ಯಾಯಾಮ ಮಾಡುವುದನ್ನು ನಿರ್ಬಂಧಿಸಬೇಕು

13 ಕಬ್ಬನ್ ಉದ್ಯಾನವನದ ಒಳಗೆ ಅಧಿಕೃತ ಪರವಾನಗಿ ಇಲ್ಲದೆ ಚಲನ ಚಿತ್ರ / ಧಾರವಾಹಿ / ವೀಡಿಯೊ ಚಿತ್ರೀಕರಣ ಮಾಡುವುದನ್ನು ತಡೆಯಬೇಕು. ಕಬ್ಬನ್ ಉದ್ಯಾನವನದ ಒಳಗೆ ಶಾಸ್ತ್ರ ಹೇಳುವುದನ್ನು, ಅನಧಿಕೃತ ಮಾರ್ಗದರ್ಶಿಗಳನ್ನು (ಗೈಡ್ಸ್) ನಿರ್ಬಂಧಿಸಬೇಕು. ಕಬ್ಬನ್ ಉದ್ಯಾನವನದ ಒಳಗೆ ತೋಟಗಾರಿಕೆ ಚಟುವಟಿಕೆಗಳನ್ನು ಬಿಟ್ಟು ಯಾವುದೇ ಪ್ರಾರ್ಥನೆ ಮತೀಯ ಅಥವಾ ಸಭೆ ಸಮಾರಂಭ ಇನ್ನಿತರ ಚಟುವಟಿಕೆಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು. ಬಿಕ್ಷುಕರು ಬಿಕ್ಷಾಟನೆ ಮಾಡುವುದನ್ನು, ಧೂಮಪಾನ, ಮಧ್ಯಪಾನ, ಮಾದಕ ವಸ್ತುಗಳ ಸೇವನೆ, ಜೂಜು, ಲೈಂಗಿಕ ಚಟುವಟಿಕೆಗಳು ಇತ್ಯಾದಿಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಬೇಕು.

14 ಸಾರ್ವಜನಿಕರು ಹೊರಗಿನಿಂದ ಬ್ರೆಡ್ ಇತ್ಯಾದಿ ತಿನಿಸುಗಳನ್ನು ನಾಯಿಗಳಿಗೆ / ಕೋತಿಗಳಿಗೆ ಹಾಕುವುದು, ಕಾಗೆಗಳಿಗೆ, ಹಕ್ಕಿಗಳಿಗೆ ಕಾಳುಗಳನ್ನು ಹಾಕುವುದು ಮತ್ತು ಇರುವೆಗಳಿಗೆ ಸಕ್ಕರೆ ಹಾಕುವುದು ಇತ್ಯಾದಿಗಳನ್ನು ನಿರ್ಬಂಧಿಸಬೇಕು.

15 ಕಬ್ಬನ್ ಉದ್ಯಾನವನ ವೀಕ್ಷಣೆಗೆ ಬರುವಂತಹ ಪ್ರವಾಸಿಗರಿಗೆ ಯಾವುದೇ ಸುಲಿಗೆ ದಬ್ಬಾಳಿಕೆಯಂತಹ ಚಟುವಟಿಕೆಗಳು ಕಂಡು ಬಂದಲ್ಲಿ ತಕ್ಷಣ ಪೋಲೀಸ್ ಠಾಣೆಗೆ ದೂರು ನೀಡತಕ್ಕದ್ದು.

16 ಕಬ್ಬನ್ ಉದ್ಯಾನವನದ ಒಳಗೆ ಬರುವಂತಹ ಪ್ರವಾಸಿಗರು ತಿಂಡಿ ತಿನಿಸುಗಳನ್ನು ತಂದು ತಿಂದ ನಂತರ ತ್ಯಾಜ್ಯ ವಸ್ತುಗಳನ್ನು ಉದ್ಯಾನಗಳಲ್ಲಿ / ಹುಲ್ಲು ಹಾಸುಗಳ ಮೇಲೆ ಬಿಸಾಡದೆ ಕಸದ ತೊಟ್ಟಿಯಲ್ಲಿಯೇ ಹಾಕುವಂತೆ ಸೂಚಿಸುವುದು.

17 ಕಬ್ಬನ್ ಉದ್ಯಾನವನದ ಒಳಗೆ ರಾತ್ರಿ 8.00 ಗಂಟೆಯಿಂದ ಬೆಳಿಗ್ಗೆ 6.00 ಗಂಟೆಯವರೆಗೆ ಕರ್ತವ್ಯದಲ್ಲಿರುವ ಅಧಿಕಾರಿ / ನೌಕರರನ್ನು ಹೊರತುಪಡಿಸಿ ಸಾರ್ವಜನಿಕರನ್ನು ಹೊರಗೆ ಕಳುಹಿಸಬೇಕು. ಕಛೇರಿ ವೇಳೆ ಅಥವಾ ಕಛೇರಿ ವೇಳೆ ನಂತರದ ಸಮಯದಲ್ಲಿ ಅನಧಿಕೃತ ವ್ಯಕ್ತಿಗಳ ಚಲನವಲನಗಳನ್ನು ನಿರ್ಬಂಧಿಸಬೇಕು ಕಬ್ಬನ್ ಉದ್ಯಾನವನದ ಕಾಂಪೌಂಡ್ ದಾಟುವುದು ಅಥವಾ ಕಾಂಪೌಂಡ್ ಗೋಡೆಯಿಂದ ಗಿಡ, ಮರ, ಸೌದೆ ಇತ್ಯಾದಿಗಳನ್ನು ಸಾಗಿಸುವುದನ್ನು ನಿರ್ಬಂಧಿಸಬೇಕು.

18 ಕಬ್ಬನ್ ಉದ್ಯಾನವನದ ಒಳಗೆ ಆಕಸ್ಮಿಕವಾಗಿ ಯಾರಾದರೂ ಮರಣ ಹೊಂದಿದಾಗ ತಕ್ಷಣ ಪೋಲೀಸ್ ಠಾಣೆಗೆ ದೂರು ನೀಡಿ ಈ ಕಛೇರಿಗೆ ವರದಿ ಮಾಡಬೇಕು

19 ಭದ್ರತೆಗಾಗಿ ನೇಮಿಸುವ ಭದ್ರತಾ ಸಿಬ್ಬಂದಿಯು ಕರ್ತವ್ಯದ ಮೇಲೆ ಇರುವಾಗ ಸಮವಸ್ತ್ರ, ಗುರುತಿನ ಬ್ಯಾಡ್ಜ್ ಧರಿಸಿರಬೇಕು. ಹಾಗೂ ಶಿಸ್ತು ಸಂಯಮದೊಂದಿಗೆ ಸಾರ್ವಜನಿಕರೊಡನೆ ಉತ್ತಮ ನಡೆ, ನುಡಿ ಇರುವಂತಹ ಸಿಬ್ಬಂದಿಯನ್ನು ಮಾತ್ರ ನೇಮಿಸಬೇಕು. ಸಿಬ್ಬಂದಿ ವರ್ಗದವರು ಕನ್ನಡ ಮತ್ತು ಆಂಗ್ಲ ಭಾಷೆಯನ್ನು ಚೆನ್ನಾಗಿ ಉಪಯೋಗಿಸುವ ಅರ್ಹತೆ ಇರಬೇಕು. ಯಾವುದೇ ಕಾರಣಕ್ಕೆ ಕರ್ತವ್ಯದ ಮೇಲೆ ಇರುವ ಸೆಕ್ಯೂರಿಟಿ ಸಿಬ್ಬಂದಿಯು ಧೂಮಪಾನ, ಮಧ್ಯಪಾನ ಮಾಡಬಾರದು. ದಿನ 24 ಗಂಟೆಗಳ ಸಂರಕ್ಷಣೆಯನ್ನು 3 ಪಾಳೆಗಳಲ್ಲಿ ವ್ಯವಸ್ಥಿತವಾಗಿ ನಿರ್ವಹಿಸಬೇಕು. 18 ವಯಸ್ಸಿನ ಕೆಳಗಿಂತ ಅಥವಾ ವಯಸ್ಸಾದವರನ್ನು ಕೆಲಸಕ್ಕೆ ನೇಮಿಸಬಾರದು.

20 ಸಾರ್ವಜನಿಕ ರಜೆಯ ದಿನಗಳಂದು ಮತ್ತು ಪ್ರತಿ ವರ್ಷ ಎರಡು ಬಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಅವಧಿಯಲ್ಲಿ ಅಲಂಕಾರಿಕ ಕುಂಡಗಳನ್ನು ಕಬ್ಬನ್ ಉದ್ಯಾನವನದಲ್ಲಿರುವ ಪ್ರತಿಮೆಗಳ ಸುತ್ತ ಜೋಡಿಸುವುದರಿಂದ ಇವುಗಳಿಗೆ ವಿಶೇಷ ಭದ್ರತೆ ನಿರ್ವಹಣೆಯನ್ನು ಮಾಡಬೇಕು.

21 ಕಬ್ಬನ್ ಉದ್ಯಾನವನದಲ್ಲಿ ಕಾರ್ಯ ನಿರ್ವಹಿಸುವ ಸಿಬ್ಬಂದಿಯ ಮೇಲೆ ದುಷ್ಕರ್ಮಿಗಳು ಮಾಡುವ ಹಲ್ಲೆಯಂತಹ ಚಟುವಟಿಕೆಗಳನ್ನು ನಿರ್ಬಂಧಿಸಬೇಕು.

22 ಕಬ್ಬನ್ ಉದ್ಯಾನವನದಲ್ಲಿ ಯಾವುದೇ ಕ್ರೀಡೆ, ಆಟಗಳು, ಸಂಗೀತೋತ್ಸವ ಶಿಬಿರಗಳು ಇತ್ಯಾದಿಗಳನ್ನು ನಿರ್ಬಂಧಿಸಬೇಕು. ಗುಲಾಬಿ ವನ, ಮತ್ತು ತಾವರೆಕೊಳದಲ್ಲಿನ ಹೂವುಗಳನ್ನು ಸಂರಕ್ಷಿಸಬೇಕು.

ಮೇಲೆ ನೀಡಿದ ಷರತ್ತುಗಳನ್ನು ಹೊರತುಪಡಿಸಿ ಕಾಲಕಾಲಕ್ಕೆ ನೀಡುವ ಸೂಚನೆಗಳನ್ನು ಪಾಲಿಸತಕ್ಕದ್ದು.

**ಷರತ್ತು ಹಾಗೂ ನಿಬಂಧನೆಗಳು**

1. ಟೆಂಡರ್‌ಗಳನ್ನು ಈ ಕಛೇರಿಯಿಂದ ಖರೀದಿಸಿದ ನಿಗದಿತ ಟೆಂಡರ್ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು. ಟೆಂಡರ್ ಸಲ್ಲಿಸುವಾಗ ರೂ.50,000=00 ಗಳ ಭದ್ರತಾ ಠೇವಣಿಯನ್ನು (ಡಿ.ಡಿ) ಡಿಮ್ಯಾಂಡ್ ಡ್ರಾಫ್ಟನ್ನು ಸದಸ್ಯ ಕಾರ್ಯದರ್ಶಿಗಳು, "ಸುವರ್ಣ ಕರ್ನಾಟಕ ಉದ್ಯಾನವನ ಪ್ರತಿಷ್ಠಾನ" ಲಾಲ್‌ಬಾಗ್, ಬೆಂಗಳೂರು ರವರ ಹೆಸರಿಗೆ ಪಡೆದು ಸಲ್ಲಿಸಬೇಕು. ಹಾಗೂ ರೂ.50,000=00 ಗಳ ಮೌಲ್ಯದ ಸಾಲ್ವೆನ್ಸಿ ಪತ್ರವನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸಲ್ಲಿಸಬೇಕು. ಕಡಿಮೆ ದರವನ್ನು ನಮೂದಿಸಿರುವ ಯಶಸ್ವಿ ಟೆಂಡರ್‌ದಾರರ ಠೇವಣಿ ಹಣವನ್ನು ಬಿಟ್ಟು ಉಳಿದ ಟೆಂಡರ್‌ದಾರರ ಠೇವಣಿಯನ್ನು ಟೆಂಡರ್ ತೆರೆಯುವ ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು. ಅಂಗೀಕೃತ ಟೆಂಡರ್‌ದಾರರ ಠೇವಣಿಯನ್ನು ಭದ್ರತಾ ಸೇವೆಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿದ ನಂತರ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು.
2. ಭದ್ರತಾ ಸೇವೆಯನ್ನು ನಿಗಧಿತ ಅವಧಿಯ ಮೊದಲೆ ಸ್ಥಗಿತ ಗೊಳಿಸಿದಲ್ಲಿ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು, ಮತ್ತು ಭದ್ರತಾ ಸೇವೆಯಲ್ಲಿ ಯಾವುದೇ ನ್ಯೂನತೆಗಳು/ಲೋಪದೋಷಗಳು (ಅಂದರೆ ನಿರ್ವಹಿಸಬೇಕಾದ ಕಾರ್ಯಕ್ರಮಗಳಲ್ಲಿ ಕ್ರಮ ಸಂಖ್ಯೆ 1 ರಿಂದ 20 ರವರೆಗೆ) ಕೆಲಸದಲ್ಲಿ ಕಂಡುಬಂದಲ್ಲಿ ಪ್ರತಿ ತಿಂಗಳು ಪಾವತಿ ಮಾಡುವ ಟೆಂಡರ್ ಮೊತ್ತದಲ್ಲಿ ಶೇಕಡ 15 ಕಡಿತಗೊಳಿಸಲಾಗುವುದು. ಹಾಗೂ ವಾಹನ, ಗಣಕ ಯಂತ್ರಗಳು, ಬೆರಳಚ್ಚು ಯಂತ್ರಗಳು, ಟಿ.ವಿ.ಗಿಡಗಳು ಮೋಟಾರ್, ಪಂಪುಗಳು, ಪೀಠೋಪಕರಣಗಳು ಇತ್ಯಾದಿಗಳ ಕಳವಿನಿಂದ ಸಂಭವಿಸಬಹುದಾದ ನಷ್ಟವನ್ನು ನಿರ್ದೇಶಕರು ನಿಗದಿಪಡಿಸುವ ಮೌಲ್ಯವನ್ನು ಗುತ್ತಿಗೆ ಹಣದಿಂದ ಕಡಿತಗೊಳಿಸಲಾಗುವುದು.
3. ಸರ್ಕಾರ / ಸರ್ಕಾರೇತರ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಿರುವುದರ ಬಗ್ಗೆ ಕನಿಷ್ಠ 3 ವರ್ಷಗಳ ಅನುಭವ / ತೃಪ್ತಿಕರ ಪ್ರಮಾಣ ಪತ್ರ ಲಗತ್ತಿಸಿರಬೇಕು. ಕಬ್ಬನ್ ಉದ್ಯಾನವನದ ಕಛೇರಿಯಲ್ಲಿ ಪ್ರತಿ ದಿನ ಕಾರ್ಯ ನಿರ್ವಹಿಸುವ / ಪಾಳಿಯಲ್ಲಿ ಕಾರ್ಯನಿರ್ವಹಿಸುವ ವ್ಯಕ್ತಿಗಳ ಹೆಸರನ್ನು ಒಳಗೊಂಡ ಪುಸ್ತಕಗಳನ್ನು ಇಡಬೇಕು / ಪ್ರತಿ ಪಾಳಿಗಳಲ್ಲಿ ಸಹಿ ಮತ್ತು ವೇಳೆಯನ್ನು ನಮೂದಿಸಬೇಕು ಹಾಗೂ ಕಾರ್ಮಿಕ ಇಲಾಖೆಯಿಂದ ಅನುಮತಿ ಪತ್ರವನ್ನು ಆದಾಯ ಇಲಾಖೆಯಿಂದ ಪಡೆದ 2007–08 ನೇ ಸಾಲಿನ ಆದಾಯ ತೆರಿಗೆ ಕ್ಲಿಯರಿನ್ಸ್ ಪತ್ರ ಪಡೆದು ಸಲ್ಲಿಸಬೇಕು. ಸದರಿ ದಾಖಲೆಗಳು ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು
4. ಭದ್ರತಾ ಸೇವೆಯನ್ನು ನಿಗದಿಗೊಳಿಸಿದ ಅವಧಿಯೊಳಗೆ ಮೊಟಕುಗೊಳಿಸುವ ಅಥವಾ ರದ್ದುಪಡಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರು ಹೊಂದಿರುತ್ತಾರೆ ಮತ್ತು ಟೆಂಡರ್‌ನ್ನು ಕಾರಣ ನೀಡದೆ ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರಲ್ಲಿ ಕಾಯ್ದಿರಿಸಲಾಗಿದೆ.
5. ಯಶಸ್ವಿ ಟೆಂಡರ್‌ದಾರರು ಭದ್ರತಾ ಸೇವೆಯನ್ನು ವಹಿಸಿಕೊಳ್ಳುವ ಮೊದಲು ಟೆಂಡರ್ ಅನಮೋದಿಸಿ ದೃಢೀಕರಣ ಪತ್ರಗಳನ್ನು ಸಲ್ಲಿಸಲು ಸೂಚಿಸಿದ ನಂತರ ಈ ಪ್ರಕಟಣೆಯಲ್ಲಿ ನಮೂದಿಸಿರುವ ಷರತ್ತುಗಳು (1 ರಿಂದ 5) ಮತ್ತು ನಿರ್ವಹಿಸಬೇಕಾದ ಕೆಲಸಗಳಿಗೆ (1 ರಿಂದ 23) ಬದ್ದನಾಗಿರುತ್ತೇನೆ. ಎಂದು ರೂ.200=00 ಛಾಪಾ ಕಾಗದದ ಮೇಲೆ ಮುಚ್ಚಳಿಕೆ ಪತ್ರವನ್ನು ಬರೆದು ನೋಟರಿ ಮಾಡಿಸಿ ಈ ಕಛೇರಿಗೆ ಸಲ್ಲಿಸಬೇಕು.
6. ಟೆಂಡರ್‌ದಾರರು ಕಾರ್ಮಿಕ ಇಲಾಖೆಯವರು ನಿಗಧಿಪಡಿಸಿದ ವೇತನವನ್ನು ಭದ್ರತಾ ಸಿಬ್ಬಂದಿಗೆ (ಮಿನಿಮಮ್ ವೇಜಸ್) ನೀಡತಕ್ಕದ್ದು
7. ಟೆಂಡರ್‌ದಾರರು ಟೆಂಡರ್ ಸಲ್ಲಿಸಲು ಕಾರ್ಮಿಕ ಭವಿಷ್ಯ ನಿಧಿ ಮತ್ತು ಇ.ಎಸ್.ಐ. ನೊಂದಣಿದಾರರಾಗಿರಬೇಕು. ಈ ಮೇಲ್ಕಂಡ ಇಲಾಖೆಯಲ್ಲಿ ಖಾತೆ ಸಂಖ್ಯೆಯನ್ನು ಹೊಂದಿರಬೇಕು.
8. ಟೆಂಡರ್‌ದಾರರು ಸ್ವಂತ ಜೀಪ್ ವಾಹನ ಹೊಂದಿರತಕ್ಕದ್ದು ವಾಹನದ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು. ಹಾಗೂ ಭದ್ರತ ಸೇವೆ ನಿರ್ವಹಿಸುವ ಸ್ಥಳಗಳಿಗೆ ಆಗಿಂದ್ದಾಗ್ಗೆ ಬೇಟಿ ನೀಡುತ್ತಿರಬೇಕು.

ಹೆಚ್ಚಿನ ವಿಷಯಗಳಿಗೆ ಈ ಕೆಳ ಸಹಿದಾರರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

ಪಿ.ಆರ್. 219

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು**

**ಟೆಂಡರ್ ಕಂ ಹರಾಜು ಪ್ರಕಟಣೆ**

**ಸಂ:ತೋಇ/ತೋಉನಿ/ಕಉ/ವಿ೨2/ 107 /2008–09, ದಿನಾಂಕ: 25ನೇ ಫೆಬ್ರವರಿ 2009.**

ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿ ಅಧೀನದ ಇಂದಿರಾಗಾಂಧಿ ಸಂಗೀತ ಕಾರಂಜಿ ಉದ್ಯಾನವನದಲ್ಲಿ ಪ್ರತಿದಿನ ಸಂಜೆ ಕಾರಂಜಿಯು ಪ್ರದರ್ಶನವು 7.00 ರಿಂದ 7.30 ಗಂಟೆಯ ವರೆಗೆ

ಹಾಗೂ 8.00 ರಿಂದ 8.30 ಗಂಟೆಯವರೆಗೆ (ಒಟ್ಟು 2 ಪ್ರದರ್ಶನ) ಇರುತ್ತದೆ. ಉದ್ಯಾನವನದ (ಕರ್ನಾಟಕ ನವೀಕರಣ ಇಂಧನ ಅಭಿವೃದ್ಧಿ ನಿಯಮಿತ) ಪ್ರವೇಶಕ್ಕೆ ಬೆಳಿಗ್ಗೆ 10.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ ಅನುಮತಿ ಇರುತ್ತದೆ. ಈ ಸಂಬಂಧ ಶುಲ್ಕವನ್ನು ವಸೂಲಾತಿ ಮಾಡುವ ಬಗ್ಗೆ ಆದೇಶ ನೀಡಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಟೆಂಡರ್ ಕರೆಯಲಾಗಿದೆ. ಆಸಕ್ತಿವುಳ್ಳ ಗುತ್ತಿಗೆದಾರರು ಈ ಮುಂದೆ ಸೂಚಿಸಿರುವ ಷರತ್ತು ಮತ್ತು ನಿಭಂದನೆಗಳಿಗೆ ಒಪ್ಪಿದಲ್ಲಿ ಟೆಂಡರ್‌ನಲ್ಲಿ ಭಾಗವಹಿಸುವುದು.

| | | | |
|---|---|---|---|
| 1 | ನಿಗಧಿತ ಟೆಂಡರ್ ಫಾರಂ ಶುಲ್ಕ. | : | ರೂ. 500/– |
| 2 | ಟೆಂಡರ್ ಫಾರಂನ್ನು ಈ ಕಛೇರಿಯಿಂದ ಪಡೆಯುವ ಅವಧಿ. | : | ದಿನಾಂಕ:20–03–2009 ರಿಂದ 23–03–2009 ರವರೆಗೆ |
| 3 | ಭರ್ತಿ ಮಾಡಿದ ಟೆಂಡರ್‌ಗಳನ್ನು ತೆರೆಯುವ ದಿನಾಂಕ (ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ). | : | ದಿನಾಂಕ:24–03–2009 ರಂದು ಮಧ್ಯಾಹ್ನ 12 ಗಂಟೆಗೆ . |
| 4 | ಬಹಿರಂಗ ಹರಾಜು ಮಾಡುವ ದಿನಾಂಕ ಮತ್ತು ಸಮಯ | | ದಿನಾಂಕ:24–03–2009 ಬೆಳ್ಳಿಗ್ಗೆ 11.00 ಗಂಟೆಗೆ |
| 5 | ಬಹಿರಂಗ ಹರಾಜು ಮಾಡುವ ಸ್ಥಳ | | ಕಬ್ಬನ್ ಉದ್ಯಾನವನದ ಉಪ ನಿರ್ದೇಶಕರ ಕಚೇರಿ ಆವರಣ |
| 6 | ಟೆಂಡರ್ ಸಲ್ಲಿಸಲು, ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ | : | ರೂ. 50,000/– |

ನಿಗಧಿತ ಅವಧಿ ಮೀರಿದ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.

ತೋಟಗಾರಿಕೆ ಉಪನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು

**ಷರತ್ತು ಮತ್ತು ನಿಭಂದನೆಗಳು**

1. ಮೊಹರಾದ ಟೆಂಡರ್‌ನ್ನು ಸಲ್ಲಿಸುವಾಗ ಹಾಗೂ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ರೂ. 50,000/– (ರೂ. ಐವತ್ತು ಸಾವಿರ ಮಾತ್ರ) ಗಳ ಬ್ಯಾಂಕ್ ಡಿಮ್ಯಾಂಡ ಡ್ರಾಫ್ಟನ್ನು ಸದಸ್ಯ ಕಾರ್ಯದರ್ಶಿಗಳು "ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ" ಲಾಲ್‌ಬಾಗ್ ಬೆಂಗಳೂರು ಇವರಿಗೆ ಪಾವತಿಸುವಂತೆ ಪಡೆದು ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ಟೆಂಡರ್ ಅವಧಿ ಮುಗಿದ ನಂತರ ಯಾವುದೇ ಕಾರಣಕ್ಕೂ ಶುಲ್ಕ ವಸೂಲಾತಿ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ.
3 ಯಶಸ್ವಿ ಟೆಂಡರ್‌ದಾರರನ್ನು 1 ಮತ್ತು 2ನೇ ಹೆಚ್ಚಿನ ಬಿಡ್ಡುದಾರರನ್ನು ಹೊರತುಪಡಿಸಿ ಉಳಿದ ಟೆಂಡರ್‌ದಾರರ ಠೇವಣಿ ಹಣವನ್ನು ಮುಕ್ತಾಯದ ನಂತರ ಹಿಂತಿರುಗಿಸಲಾಗುವುದು. ಯಶಸ್ವಿ ಟೆಂಡರ್‌ದಾರರ : ಬಿಡ್ಡುದಾರರು ಭದ್ರತಾ ಠೇವಣಿ ಹಣವನ್ನು ಟೆಂಡರ್ ಅವಧಿಯನ್ನು ಸಮರ್ಪಕವಾಗಿ ಮತ್ತು ತೃಪ್ತಿಕರವಾಗಿ ಪೂರೈಸಿದ ನಂತರ ಹಿಂದಿರುಗಿಸಲಾಗುವುದು. ಠೇವಣಿ ಹಣಕ್ಕೆ ಯಾವುದೇ ಬಡ್ಡಿ ಹಣವನ್ನು ಕೊಡಲಾಗುವುದಿಲ್ಲ. ಎರಡನೇ ಅತಿ ಹೆಚ್ಚಿನ ಟೆಂಡರ್‌ದಾರರ ಠೇವಣಿ ಹಣವನ್ನು ಟೆಂಡರ್ ಅನುಮೋದನೆಯ ನಂತರ ಹಿಂದಿರುಗಿಸಲಾಗುವುದು.
4. ಟೆಂಡರ್‌ಗಳನ್ನು ಸಲ್ಲಿಸಲು ಇಚ್ಛಿಸುವವರು ಈ ಕಛೇರಿಯಿಂದ ಖರೀದಿಸಿದ ನಿಗಧಿತ ಟೆಂಡರ್ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು. ಈ ಕಛೇರಿಯಿಂದ ಪಡೆದ ಟೆಂಡರ್ ಫಾರಂನಲ್ಲಿ ಧರವನ್ನು ನಮೂದಿಸಿರುವ ಟೆಂಡರ್ ಮಾತ್ರ ಒಪ್ಪಿಕೊಳ್ಳಲಾಗುವುದು. ಟೆಂಡರ್‌ನಲ್ಲಿ ಯಾವುದೇ ತಪ್ಪು ಓದಲಾಗದಂತೆ ಬರೆದಿರಬಾರದು. ಸ್ವಚ್ಛವಾಗಿ ನಮೂದಿಸಿರಬೇಕು. ಟೆಂಡರ್‌ನಲ್ಲಿ ಯಾವುದೇ ಪೂರ್ವ ಷರತ್ತುಗಳನ್ನು ನಮೂದಿಸಕೂಡದು.
5. ಯಶಸ್ವಿ ಟೆಂಡರ್‌ದಾರರ: ಬಿಡ್ಡುದಾರರ ಅಂತಿಮ ಸವಾಲಿನ ಮೊತ್ತದ ಅಂದರೆ ವಾರ್ಷಿಕ ಮೊತ್ತದ ಶೇಕಡ 50 ಭಾಗದ ಹಣವನ್ನು ಟೆಂಡರ್ ಯಾ ಹರಾಜು ಮುಗಿದ ತಕ್ಷಣ ಸ್ಥಳದಲ್ಲಿಯೇ ಪಾವತಿಸ ಬೇಕು. ಉಳಿದ ಶೇಕಡ 50 ಭಾಗದ ಹಣವನ್ನು ತೋಟಗಾರಿಕೆ ನಿರ್ದೇಶಕರವರಿಂದ ಅನುಮೋದಿಸುವ ದಿನಾಂಕದಿಂದ ಅಥವಾ ಈ ಕಛೇರಿಯಿಂದ ಹಣ ಪಾವತಿಸಲು ಸೂಚಿಸಿದ ದಿನಾಂಕದಿಂದ 3 ದಿನಗಳೊಳಗೆ ಈ ಕಛೇರಿಗೆ ಕಟ್ಟಬೇಕು. ತಪ್ಪಿದ್ದಲ್ಲಿ ಟೆಂಡರ್ ಯಾ ಹರಾಜುಗಾಗಿ ಕಟ್ಟಿರುವ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.
6. ಟೆಂಡರ್ ಅನ್ನು ಮೊಹರು ಮಾಡಿದ ಲಕೋಟೆಯಲ್ಲಿಟ್ಟು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ಕಬ್ಬನ್ ಉದ್ಯಾನವನದಲ್ಲಿ ಇಂದಿರಾ ಗಾಂಧಿ ಸಂಗೀತ ಕಾರಂಜಿ ಪ್ರವೇಶ ಟಿಕೇಟ್ ಶುಲ್ಕ ವಸೂಲಾತಿಗೆ ಟೆಂಡರ್ ಎಂದು ನಮೂದಿಸಿರಬೇಕು. ಹಾಗೂ ನಿಗಧಿತ ಅವಧಿಯೊಳಗೆ ಈ ಕಛೇರಿಗೆ ಕಳುಹಿಸಬೇಕು.
7. ಟೆಂಡರ್‌ದಾರರು : ಬಿಡ್ಡುದಾರರು ಶುಲ್ಕ ವಸೂಲಾತಿ ಮಾಡುವ ಜಾಗವನ್ನು ಮೊದಲು ವೀಕ್ಷಿಸಬೇಕು.

8. ಯಶಸ್ವಿ ಟೆಂಡರ್‌ದಾರರು : ಬಿಡ್ಡುದಾರರು ಅಂತಿಮ ಸವಾಲಿನ ಹಣವನ್ನು ಅನುಮೋದಿಸಿದ ನಂತರ ಪ್ರವೇಶ ನಿಲುಗಡೆ ಶುಲ್ಕ ವಸೂಲಿ ಕಾರ್ಯವನ್ನು ವಹಿಸಿಕೊಳ್ಳುವ ಮೊದಲು ರೂ. 200/– ಮೌಲ್ಯದ ಛಾಪ ಕಾಗದದ ಮೇಲೆ ಟೆಂಡರ್‌ನ ಎಲ್ಲಾ ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧನಾಗಿರುತ್ತೇನೆ. ಎಂಬುದಾಗಿ ಕರಾರು ಪತ್ರವನ್ನು ಬರೆದು ಈ ಕಛೇರಿಗೆ ಸಲ್ಲಿಸಬೇಕು.

9. ಪ್ರವೇಶ ಶುಲ್ಕವನ್ನು ಬೆಳಿಗ್ಗೆ 10.00 ಗಂಟೆಯಿಂದ ರಾತ್ರಿ 8.00 ಗಂಟೆಯ ಅವಧಿಯಲ್ಲಿ ಈ ಮುಂದೆ ಸೂಚಿಸಿದ ಧರವನ್ನು ಮಾತ್ರ ವಸೂಲಿ ಮಾಡಬೇಕು (ಇಲಾಖಾ ಸಿಬ್ಬಂಧಿ ಮತ್ತು ವಾಹನ ಹೊರತು ಪಡಿಸಿ) ಹಾಗೂ ಪ್ರತಿ ಸೋಮವಾರ ಮತ್ತು ಎರಡನೆ ಮಂಗಳವಾರ ರಜಾ ದಿನವಾಗಿರುತ್ತದೆ.

| ಕ್ರಮ ಸಂಖ್ಯೆ | ವಿವರಗಳು | ಟಿಕೇಟ್ ಶುಲ್ಕ (ರೂ ಗಳಲ್ಲಿ) |
|---|---|---|
| 1. | ಬೆಳಿಗ್ಗೆ 10.00 ಗಂಟೆಯಿಂದ ಸಂಜೆ 5.00 ಗಂಟೆಯವರೆಗೆ | 5.00 |
| | **ಸಂಜೆ 5.00 ಗಂಟೆಯ ನಂತರ** | |
| 1 | ವಯಸ್ಕರಿಗೆ | 10.00 |
| 2 | ಮಕ್ಕಳಿಗೆ (below 12 years) | 5.00 |
| 3 | ದ್ವಿ ಚಕ್ರ ವಾಹನ | 2.00 |
| 4 | ಕಾರು | 5.00 |
| 5 | ಟೆಂಪೂ | 10.00 |
| 6 | ಮಿನಿ ಬಸ್ಸು | 10.00 |
| 7 | ಬಸ್ಸು | 25.00 |

10. ಪ್ರವೇಶ ಶುಲ್ಕ ವಸೂಲಾತಿ ಮಾಡುವ ಅವಧಿಗೆ ಮತ್ತು ಧರಗಳ ಬಗ್ಗೆ ಈ ಕಛೇರಿಯ ಅಧಿಕಾರಿಗಳು ಸೂಚಿಸುವ ಸ್ಥಳದಲ್ಲಿ ಸಾರ್ವಜನಿಕರ ಗಮನಕ್ಕೆ ಸ್ಪಷ್ಟವಾಗಿ ಬೋರ್ಡ್ ಮೇಲೆ ಪ್ರಕಟಿಸಬೇಕು. ಪ್ರವೇಶ ಶುಲ್ಕ ವಸೂಲಾತಿಗೆ ನಿಗಧಿತ ಧರದಲ್ಲಿ ಯಶಸ್ವಿ ಟೆಂಡರ್‌ದಾರರು ಸ್ವಂತ ಖರ್ಚಿನಿಂದ ಮುದ್ರಿಸುವ ಟಿಕೇಟ್‌ಗಳನ್ನು ಮಾತ್ರ ಉಪಯೋಗಿಸಬೇಕು. ಸಿರಿಯಲ್ ನಂಬರ್‌ನ ಟಿಕೆಟ್ ಬಳಸಬೇಕು. ಕೌಂಟರ್ ಪಾಯಿಲ್ ಇಡಬೇಕು.

ಅ. ಯಶಸ್ವಿ ಟೆಂಡರ್‌ದಾರರು : ಬಿಡ್ಡುದಾರರು ಇಲಾಖಾ ಸಿಬ್ಬಂದಿ ಮತ್ತು ಸಾರ್ವಜನಿಕರ ಜೊತೆ ಸೌಜನ್ಯದಿಂದ ವರ್ತಿಸತಕ್ಕದ್ದು, ಹಾಗೂ ಯಾವುದೇ ದೂರಿಗೂ ಆಸ್ಪದ ನೀಡಬಾರದು, ಈ ಬಗೆಗಿನ ದೂರುಗಳು ಬಂದಲ್ಲಿ ಟೆಂಡರ್‌ದಾರರ ಗುತ್ತಿಗೆ ರದ್ದುಪಡಿಸಲಾಗುವುದು.

11. ವಾಹನ ನಿಲುಗಡೆ ಶುಲ್ಕ ವಸೂಲಾತಿಗೆ ಟೆಂಡರ್ ಅವಧಿಯನ್ನು ಯಾವುದೇ ಕಾರಣಕ್ಕೂ ವಿಸ್ತರಿಸಲಾಗುವುದಿಲ್ಲ. ಹಾಗೂ ನಿಗಧಿಪಡಿಸಿರುವ ಧರಗಳನ್ನು ಪರಿಷ್ಕರಿಸಲಾಗುವುದಿಲ್ಲ. ಯಶಸ್ವಿ ಟೆಂಡರರ್‌ದಾರರು : ಬಿಡ್ಡುದಾರರು ಅನಧಿಕೃತವಾಗಿ ಹೆಚ್ಚಾಗಿ ಟಿಕೆಟ್ ಧರ ವಸೂಲಿ ಮಾಡಬಾರದು. ಹಾಗೆ ಮಾಡಿದಲ್ಲಿ ದಂಡ ವಸೂಲಿ ಜೊತೆಗೆ ಟೆಂಡರ್ ರದ್ದುಪಡಿಸಲಾಗುತ್ತದೆ. ಹಾಗೂ ಭದ್ರತೆ ಠೇವಣಿ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.

12. ಯಶಸ್ವಿ ಟೆಂಡರ್‌ದಾರರು ಬಿಡ್ಡುದಾರರು ರೂ 2.00 ಲಕ್ಷಗಳ ಮೊತ್ತಕ್ಕೆ ಷೆಡ್ಯೂಲ್ ಬ್ಯಾಂಕಿನಿಂದ Solvency ಪಡೆದು ಒದಗಿಸಬೇಕು. ಯಶಸ್ವಿ ಟೆಂಡರ್‌ದಾರರು : ಬಿಡ್ಡುದಾರರು ಯಾವುದೇ ಷರತ್ತುಗಳನ್ನು ಉಲ್ಲಂಘಿಸಿ ವರ್ತಿಸಿದಲ್ಲಿ ಅವರ ಭದ್ರತಾ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಟೆಂಡರ್ ತೆರೆಯುವ ಸಂಧರ್ಭದಲ್ಲಿ ಟೆಂಡರ್ : ಬಿಡ್ಡುದಾರರು ಮಾತ್ರ ಹಾಜರಿರಬೇಕು.

13.. ಯಶಸ್ವಿ ಟೆಂಡರ್‌ದಾರರು : ಬಿಡ್ಡುದಾರರು ಶುಲ್ಕ ವಸೂಲಾತಿ ಹಕ್ಕನ್ನು ಬೇರೆಯವರಿಗೆ ಪರಭಾರೆ ವರ್ಗಾವಣೆ ಮಾಡಬಾರದು ಹಾಗೂ ಟೆಂಡರ್‌ದಾರರಿಗೆ ಆಗುವ ಯಾವುದೇ ನಷ್ಟಕ್ಕೆ ಇಲಾಖೆ ಜವಾಬ್ದಾರಿಕೆ ಇರುವುದಿಲ್ಲ.

14. ಟೆಂಡರ್‌ನ್ನು ಯಾವುದೇ ಕಾರಣ ನೀಡದೇ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು–04 ರವರಲ್ಲಿ ಕಾಯ್ದಿರಿಸಲಾಗಿದೆ.

ಅ. ಟೆಂಡರ್ ಪ್ರಕ್ರಿಯೆ ಮೂಲಕ ನಿರೀಕ್ಷಿತ ಮಟ್ಟದ ಮೊತ್ತವು ಟೆಂಡರ್‌ದಾರರಿಂದ ಸೂಚಿತವಾಗದಿದ್ದ ಪಕ್ಷದಲ್ಲಿ ಮರು ಟೆಂಡರ್ ಮಾಡುವ ಹಕ್ಕನ್ನು ಈ ಕೆಳಗೆ ಸಹಿ ಮಾಡಿದವರು ಹೊಂದಿರುತ್ತಾರೆ.

15. ಮೇಲೆ ವಿಧಿಸಿರುವ ನಿಭಂದನೆಗಳು ಮತ್ತು ಷರತ್ತುಗಳನ್ನು ಟೆಂಡರ್‌ದಾರರು ಪಾಲಿಸದಿದ್ದಲ್ಲಿ ಟೆಂಡರ್ ಷರತ್ತು ಉಲ್ಲಂಘಿಸಿದ ಕಾರಣಕ್ಕಾಗಿ ಕಟ್ಟಿರುವ ಪೂರ್ಣ ಟೆಂಡರ್ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಟೆಂಡರ್ ತಿರಸ್ಕರಿಸಲಾಗುತ್ತದೆ.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ. ಬೆಂಗಳೂರು.

ಪಿ.ಆರ್. 220

**ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ, ಹಾಗೂ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ.**

**ಅಧಿಸೂಚನೆ**

**ಸಂ:ಕಂ:ಗ್ರಾಲೆಸಿ: 126/08–09, ದಿನಾಂಕ. 28ನೇ ಫೆಬ್ರವರಿ 2009**

**ವಿಷಯ:** ಬಳ್ಳಾರಿ ಜಿಲ್ಲೆ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್. ಪಿ. 299 ಬಿ ಎಸ್ ಸಿ 2006 ದಿ: 03–02–09.

ಬಳ್ಳಾರಿ ಜಿಲ್ಲಾ ಕಂದಾಯ ಇಲಾಖಾ ಘಟಕದಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ.

ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ನಿಗದಿತ ನಮೂನೆಯಲ್ಲಿ ಎಲ್ಲಾ ವಿವರಗಳೊಂದಿಗೆ ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರಿಗೆ ದಿನಾಂಕ: 30–03–2009 ರಂದು ಸಾ: 5.00 ಗಂಟೆಯೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಅಂಚೆ ಅಥವಾ ಕೊರಿಯರ್ ಮೂಲಕ ಮಾತ್ರ ಕಳುಹಿಸುವುದು ಹುದ್ದೆಗಳ ಸಂಖ್ಯೆಯನ್ನು ಕಡಿಮೆ ಅಥವಾ ಹೆಚ್ಚು ಮಾಡುವುದಕ್ಕೆ ಜಿಲ್ಲಾಧಿಕಾರಿಗಳಿಗೆ ಮಾತ್ರ ಅಧಿಕಾರವಿರುತ್ತದೆ.

**1 ಹುದ್ದೆಗಳ ವಿವರ:**

**ಗ್ರಾಮ ಲೆಕ್ಕಾಧಿಕಾರಿಗಳ ಖಾಲಿ ಇರುವ ಒಟ್ಟು ಹುದ್ದೆಗಳು : 51**

| ಕ್ರ.ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ | ವೇತನ ಶ್ರೇಣಿ |
|---|---|---|---|---|
| 01 | ಗ್ರಾಮ ಲೆಕ್ಕಿಗ | 51 | ಪಿ. ಯು. ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು | 5800–10500 |

**ಮೀಸಲಾತಿ ವರ್ಗಗಳು ಈ ಕೆಳಗಿನಂತಿದೆ**

| ಕ್ರ.ಸಂ | ವರ್ಗ | ಹುದ್ದೆಗಳು | ಮ. ಅ. | ಮಾ. ಸೈ. | ಅಂ. ವಿ | ಯೊ ನಿ ಅ | ಗ್ರಾ. ಅ. | ಕ. ಮಾ. ಅ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|---|
| 1 | ಸಾಮಾನ್ಯ | 25 | 8 | 2 | 2 | 1 | 6 | 1 | 5 | 25 |
| 2 | ಪ. ಜಾತಿ | 8 | 3 | 0 | 1 | 0 | 2 | 0 | 2 | 8 |
| 3 | ಪ. ಪಂಗಡ | 2 | 1 | 0 | 0 | 0 | 0 | 0 | 1 | 2 |
| 4 | ಪ್ರವರ್ಗ I | 2 | 1 | 0 | 0 | 0 | 0 | 0 | 1 | 2 |
| 5 | ಪ್ರವರ್ಗ II (ಎ) | 8 | 3 | 0 | 1 | 0 | 2 | 0 | 2 | 8 |
| 6 | ಪ್ರವರ್ಗ II (ಬಿ) | 2 | 1 | 0 | 0 | 0 | 0 | 0 | 1 | 2 |
| 7 | ಪ್ರವರ್ಗ III (ಎ) | 2 | 1 | 0 | 0 | 0 | 0 | 0 | 1 | 2 |
| 8 | ಪ್ರವರ್ಗ III (ಬಿ) | 2 | 1 | 0 | 0 | 0 | 0 | 0 | 1 | 2 |
| | **ಒಟ್ಟು** | **51** | **19** | **2** | **4** | **1** | **10** | **1** | **14** | **51** |

1. ಮಾ.ಸೈ– ಮಾಜಿ ಸೈನಿಕರು
2. ಕ. ಮಾ. ಅ. – ಕನ್ನಡ ಮಾಧ್ಯಮ ಅಭ್ಯರ್ಥಿ
3. ಯೋ ನಿ. ರಾ– ಯೋಜನಾ ನಿರಾಶ್ರಿತರು
4. ಅಂ. ವಿ: – ಅಂಗವಿಕಲರು
5. ಮ. ಅ– ಮಹಿಳಾ ಅಭ್ಯರ್ಥಿ
6. ಗ್ರಾ. ಅ. – ಗ್ರಾಮೀಣ ಅಭ್ಯರ್ಥಿ

2. ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:

ವಯೋಮಿತಿ: ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಕೆಳಕಂಡ ವಯೋಮಿತಿ ಹೊಂದಿರತಕ್ಕದ್ದು.

| | | |
|---|---|---|
| ಪ. ಜಾ: ಪ. ಪಂ., ಪ್ರವರ್ಗ I | : ಕನಿಷ್ಟ 18 | ಗರಿಷ್ಟ–40 |
| ಹಿಂದುಳಿದ ವರ್ಗ | : ಕನಿಷ್ಟ 18 | ಗರಿಷ್ಟ– 38 |
| ಸಾಮಾನ್ಯ ವರ್ಗ | : ಕನಿಷ್ಟ 18 | ಗರಿಷ್ಟ–35 |

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಟ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವರು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

(ಅ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

(ಇ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

3. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.

4. ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿ ಸಲ್ಲಿಸಬೇಕು ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಛೇರಿಯ **web site** **www.bellary.nic.in** ಇಂದ ಡೌನ್ ಲೋಡ್ ಮಾಡಿಕೊಳ್ಳಬಹುದು. ಜಿಲ್ಲಾಧಿಕಾರಿಗಳ ಕಛೇರಿಯಿಂದ ಅರ್ಜಿಯನ್ನು ಒದಗಿಸಲಾಗುವುದಿಲ್ಲ. ಲಕೋಟೆಯ ಮೇಲೆ ಅರ್ಜಿ ಸಲ್ಲಿಸುವ ಹುದ್ದೆಯ ಹೆಸರು ನಮೂದಿಸಿರಬೇಕು.
5. ನಿಗದಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.
6. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ನೇಮಕಾತಿ ಪ್ರಾಧಿಕಾರ / ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸುವುದು.
7. ಅಭ್ಯರ್ಥಿಯು ತನ್ನ ಇತ್ತೀಚಿನ ಭಾವ ಚಿತ್ರವೊಂದನ್ನು ಅರ್ಜಿಯ ಬಲಗಡೆ ಮೇಲ್ಭಾಗದಲ್ಲಿ ಅಂಟಿಸಬೇಕು.
8. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪ್ರಚಾರ ಅಥವಾ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
9. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.
10. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
11. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು ಬಳ್ಳಾರಿ ರವರು ಕಾಯ್ದಿರಿಸಿಕೊಂಡಿರುತ್ತಾರೆ.
12. ಪ. ಜಾತಿ / . ಪಂಗಡ ಮತ್ತು ಪ್ರವರ್ಗ –1 ಅಭ್ಯರ್ಥಿಗಳು ರೂ. 100/– ಹಾಗೂ ಇತರರಿಗೆ ರೂ. 300/– ಗಳಿಗೆ ಬ್ಯಾಂಕ್ ಡಿ. ಡಿ. ಯನ್ನು ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಮತ್ತು ಡಿ. ಡಿ. ಗಳನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಮಾತ್ರ ಖರೀದಿಸತಕ್ಕದ್ದು ಹಾಗೂ ಡಿ. ಡಿ. ಯ ಹಿಂದೆ ಹೆಸರು ಮತ್ತು ವಿಳಾಸವನ್ನು ನಮೂದಿಸತಕ್ಕದ್ದು. ಡಿ.ಡಿ. ಗಳನ್ನು ಲಗತ್ತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
13. ಸಹಿ ಮಾಡದಿರುವ ಹಾಗೂ ಅಪೂರ್ಣ ಭರ್ತಿ ಮಾಡಿರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೂ ಭರ್ತಿ ಮಾಡಿರುವ ಅರ್ಜಿಗಳನ್ನು ನೇರವಾಗಿ ಕಛೇರಿಯಲ್ಲಿ ಸ್ವೀಕರಿಸುವುದಿಲ್ಲ.
14. ಆಯ್ಕೆಯನ್ನು ಅಭ್ಯರ್ಥಿಯ ಮೆರಿಟ್ ಆಧಾರದ ಮೇಲೆ ಮಾತ್ರ ಪರಿಗಣಿಸಲಾಗುವುದು.
15. ಅಂಚೆ ವಿಳಂಬಕ್ಕೆ ಜಿಲ್ಲಾಧಿಕಾರಿಗಳ ಕಛೇರಿ ಜವಾಬ್ದಾರರಾಗುವುದಿಲ್ಲ.

**16. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು:**

ಮೀಸಲಾತಿ ಸೌಲಭ್ಯ ಆಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ದಾಖಲೆಗಳ ಪ್ರತಿಗಳನ್ನು ಅರ್ಜಿ ಸಲ್ಲಿಸುವ ದಿನಾಂಕದಂದು ನಿಗದಿತ ನಮೂನೆಯಲ್ಲಿ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ ಪಡೆದು ಲಗತ್ತಿಸಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು.

| | |
|---|---|
| ಪ. ಜಾ / ಪ. ಪಂ – ಪ್ರವರ್ಗ –1 | ಸರ್ಕಾರದ ಅಧಿಸೂಚನೆ SWD 132 SAD 87 ದಿ: 08–02–2000 ಕ್ರಮವಾಗಿ ನಮೂನೆ –1 ಹಾಗೂ 2 |
| ಪ್ರವರ್ಗ 2ಎ, 2ಬಿ, 3ಎ, 3ಬಿ | ಸರ್ಕಾರದ ಅಧಿಸೂಚನೆ SWD 20 BCA ದಿ: 13–12–2003 ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ ತಿದ್ದುಪಡಿ) ನಿಯಮಗಳು 2000 ರನ್ವಯ ನಮೂನೆ–3 |

ಮೀಸಲಾತಿ ಪ್ರಮಾಣ ಪತ್ರಗಳು ಚಾಲ್ತಿಯಲ್ಲಿರಬೇಕು.

**17. ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು:**

ಸರ್ಕಾರಿ ಆದೇಶ ಸಂ: ಸಿ ಆ ಸು ಇ 71 ಸೇ ನೆ ನಿ 2001 ದಿನಾಂಕ: 24–10–2002 ರನ್ವಯ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ. ಈ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರು ನೀಡಿದ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು.

**18. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು:**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ ಪ್ರಮಾಣ ಪತ್ರಗಳನ್ನು ಪಡೆದಿರಬೇಕು.

**19. ಅಂಗವಿಕಲ ಕುಟುಂಬದ ಅಭ್ಯರ್ಥಿಗಳು:**

ಅಂಗವಿಕಲ ಅಭ್ಯರ್ಥಿ ಎಂದರೆ, ಸರ್ಕಾರದ ಆದೇಶ ಸಂ: ಡಿ.ಪಿ. ಎ. ಆರ್. 52 ಎಸ್. ಆರ್ ಆರ್ 99 ದಿ: 29.11.2002 ರಂತೆ

(ಎ) ಕುಷ್ಟರೋಗ ನಿವಾರಿತರು

(ಬಿ) ಶ್ರವಣ ದೋಷ ಉಳ್ಳವರು ಅಂದರೆ 70 ಡೆಸಿಬಲ್ಸ್ ಮತ್ತು ಅದಕ್ಕಿಂತ ಹೆಚ್ಚು.

(ಸಿ) ಮೂಳೆಗಳು, ಮಾಂಸಖಂಡಗಳು ಮತ್ತು ಕೀಲುಗಳ ವಾಡಿಕೆಯ ಕಾರ್ಯ ನಿರ್ವಹಣೆಗೆ ಅಡಚಣೆಯಾಗುವಂತಹ ದೈಹಿಕ ದೋಷ ಅಥವಾ ವಿಕಲತೆ ಹೊಂದಿರುವ ವ್ಯಕ್ತಿಗಳು ಅರ್ಹರಾಗಿರುವುದಿಲ್ಲ.

(ಡಿ) ರಾಜ್ಯದ ಸರ್ಕಾರಿ ಜಿಲ್ಲಾ ಮತ್ತು ತಾಲೂಕು ಆಸ್ಪತ್ರೆಗಳಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿದವರಾಗಿರುತ್ತಾರೆ.

ಸರ್ಕಾರದ ಆದೇಶ ಸಂ: ಡಿ ಪಿ ಎ ಆರ್ 07 ಸೇ ಸೈ ಅ 94 ದಿನಾಂಕ: 13–09–1995 ರಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**20. ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ, ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್. ಎಸ್. ಎಲ್. ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಪತ್ರವನ್ನು ಲಗತ್ತಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು, ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ –2 ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ –1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರಿರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ –1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ 2 ರಲ್ಲಿ ನಿಗದಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಂಡು ಅದರ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**21. ಕನ್ನಡ ಮಾಧ್ಯಮ ಅಭ್ಯರ್ಥಿಗಳು:**

ಸರ್ಕಾರದ ಅಧಿಸೂಚನೆ ಸಂ: ಐ ಪಿ ಎ ಆರ್ 71 ಎಸ್ ಆರ್ ಆರ್ 2001 ದಿ: 24–10–2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು

1977 ರ ನಿಯಮ (9) (1) (ಸಿ) ರನ್ವಯ ಅಭ್ಯರ್ಥಿಯು 1 ರಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

**22. ಅರ್ಹತಾ ಷರತ್ತುಗಳು:**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**23. ಕೆಳಕಂಡ ದಾಖಲೆಗಳನ್ನು ಅರ್ಜಿಯ ಜೊತೆಗೆ ಲಗತ್ತಿಸಿದೆಯೇ ಎಂದು ಖಚಿತಪಡಿಸಿಕೊಳ್ಳುವುದು.**

* ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ / ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ
* ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್. ಎಸ್. ಎಲ್. ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ
*. ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಮೀಸಲಾತಿ ಕೋರಿದ್ದಲ್ಲಿ)

* ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ –1, ಪ್ರವರ್ಗ –2ಎ, ಪ್ರವರ್ಗ –2ಬಿ, ಪ್ರವರ್ಗ –3ಬಿ ಗಳ ಪ್ರಮಾಣ ಪತ್ರಗಳು ( ಮೀಸಲಾತಿ ಕೋರಿದ್ದಲ್ಲಿ)
* ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ –1 ರಲ್ಲಿ 2 ರಲ್ಲಿ ( ಮೀಸಲಾತಿ ಕೋರಿದ್ದಲ್ಲಿ)
* ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ ( ಮೀಸಲಾತಿ ಕೋರಿದ್ದಲ್ಲಿ)
* ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ ( ಮೀಸಲಾತಿ ಕೋರಿದ್ದಲ್ಲಿ)
* ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ ( ಮೀಸಲಾತಿ ಕೋರಿದ್ದಲ್ಲಿ)
* ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ

**ಮೇಲ್ಕಂಡಂತೆ ನಿಗದಿಪಡಿಸಿದ ದಾಖಲೆಗಳನ್ನು ಸಲ್ಲಿಸದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು**

**24. ಇತರೆ ಸೂಚನೆಗಳು:**

1. ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.
2. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

ಜಿಲ್ಲಾಧಿಕಾರಿಗಳು,
ಬಳ್ಳಾರಿ ಜಿಲ್ಲೆ, ಬಳ್ಳಾರಿ.

**ಅರ್ಜಿ (ನಮೂನೆ)**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬಳ್ಳಾರಿ**

**Deputy Commissioner Office, Bellary**

**ಅಧಿಸೂಚನೆ ಸಂ:ಕಂ:ಗ್ರಾಲೆಪ 126/08–09, ದಿನಾಂಕ: 28–2–2009**

**ಜಿಲ್ಲೆಯ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗೆ ಅರ್ಜಿ**

**Application for Village Accountant Post**

PHOTO

| | | | | | |
|---|---|---|---|---|---|
| 1 | ಎ. ಹೆಸರು/ Name<br>ಬಿ. ತಾಯಿಯ ಹೆಸರು/ Mother Name<br>ಸಿ. ತಂದೆಯ ಹೆಸರು/ Father Name | | | | |
| 2 | ಲಿಂಗ/ Gender<br>ಪುರುಷ /Male ಮಹಿಳೆ/Female | | | | |
| 3 | ಜನ್ಮ ದಿನಾಂಕ<br>(ಎಸ್.ಎಸ್.ಎಲ್.ಸಿ. ಪ್ರಮಾಣ ಪತ್ರದಲ್ಲಿದ್ದಂತೆ)<br>Date of Birth As in SSLC Marks card | ದಿನಾಂಕ | ತಿಂಗಳು | ವರ್ಷ | ವಯಸ್ಸು |
| 4 | ಕೋರಿರುವ ಮೀಸಲಾತಿ / Reservation claimed<br>1) ಸಾ.ಅ / GM, 2). ಪಜಾ/SC, 3) ಪಪಂ/ST,<br>4) ಪ್ರವರ್ಗ1/CAT I 5)2ಎ/ 2A, 6) 2ಬಿ/2B,<br>7) 3ಎ/3A, 8)3ಬಿ/3B. | | | | |
| 4ಎ | ಉಪ ಜಾತಿ /Sub Caste | | | | |
| 4ಬಿ | ನೀವು ಕೆಳಗಿನ ಮೀಸಲಾತಿಗಳಲ್ಲಿ ಬರುವಿರಾ ? ಹಾಗಿದ್ದಲ್ಲಿ ಸೂಕ್ತ ಪ್ರಮಾಣ ಪತ್ರ ಲಗತ್ತಿಸಿ.<br>1) ಗ್ರಾಮೀಣ /Rural, 2) ಕಮಾಅ/KMS, 3)ಮಾಜಿಸೈ/ Ex Military Person, 4) ಯೋ.ಅ/ POP, 5)ಅಂಗವಿಕಲ/ PHP | | | | |
| 5 | ನೀವು ಸರ್ಕಾರಿ ಸೇವೆಯಲ್ಲಿರುವಿರಾ / Are you in Government Service ಹೌದು / Yes | | | | |
| 6 | ನೀವು ಎಸ್.ಎಸ್.ಎಲ್.ಸಿ. ಅಥವಾ ಅದಕ್ಕೆ ತತ್ಸಮಾನತೆಯ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್. ಎಲ್.ಸಿ ಗಿಂತ ಮೇಲ್ಪಟ್ಟ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆ/ದ್ವಿತೀಯ ಭಾಷೆ. ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗಮಾಡಿ ತೇರ್ಗಡೆಯಾಗಿರುವಿರಾ / ಹಾಗಿದ್ದಲ್ಲಿ ಸೂಕ್ತ ಪ್ರಮಾಣ ಪತ್ರ ಲಗತ್ತಿಸಿ.<br>ಹೌದು /Yes ಇಲ್ಲ/ No | | | | |

| | | |
|---|---|---|
| 7 | ಲೋಕಸೇವಾ ಆಯೋಗದಿಂದ ಈ ಹಿಂದೆ ನಡೆಸಲ್ಪಟ್ಟ ಕನ್ನಡ ಭಾಷೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ ಪರೀಕ್ಷೆ ನಡೆದ ದಿನಾಂಕ ಮತ್ತು ನೊಂದಣೆ ಸಂಖ್ಯೆ ನಮೂದಿಸುವುದು. | |
| 8 | ನೀವು ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತೀರಾ<br>ಹೌದು /Yes ಇಲ್ಲ/No | |
| 9 | ಹೆಸರು ಮತ್ತು ಪೂರ್ಣ ವಿಳಾಸ<br>ಹೆಸರು/Name<br>ವಿಳಾಸ/Address<br>ದೂರವಾಣಿ/ Phone No<br>Pin: | |
| 10 | ನಿಗದಿತ ಶುಲ್ಕ ಪಾವತಿಯ ವಿವರ ಡಿ.ಡಿ.ನಂ:–<br>ದಿನಾಂಕ:– | |

ಸ್ಥಳ:
ದಿನಾಂಕ: (ಸಹಿ)
ಪಿ.ಆರ್. 206 (Signature)

**ವೈದ್ಯಾಧಿಕಾರಿಯವರ ಕಛೇರಿ, ಸರ್ಕಾರಿ ಸಾರ್ವಜನಿಕ ಆಸ್ಪತ್ರೆ, ಪುತ್ತೂರು ದ.ಕ.**

**ಸಂಕ್ಷಿಪ್ತ ಮರುಟೆಂಡರು ಅಧಿಸೂಚನೆ**

**ಕ್ರಮಾಂಕ: ಸಾ.ಆ.ಪು./ಆಹಾರ/ಟೆಂಡರ್/622/09–10, ದಿನಾಂಕ: 21ನೇ ಫೆಬ್ರವರಿ 2009**

ಪುತ್ತೂರು ಸರಕಾರಿ ಸಾರ್ವಜನಿಕ ಆಸ್ಪತ್ರೆ, ಪುತ್ತೂರು ಇಲ್ಲಿಗೆ ದಿನಾಂಕ: 01.04.2009 ರಿಂದ 31.03.2010 ರವರೆಗಿನ ಒಂದು ವರ್ಷದ ಅವಧಿಗೆ (1) ಆಹಾರ ಸಾಮಗ್ರಿಗಳು ಸಮೂಹ 'ಎ' ಯಿಂದ 'ಎಫ್' (ಸಕ್ಕರೆ, ಬೆಣ್ಣೆ, ಮೀನು ಮತ್ತು ಮಾಂಸ ಹೊರತುಪಡಿಸಿ), (2) ಆಸ್ಪತ್ರೆಯ ಅವಶ್ಯಕ ಸಾಮಗ್ರಿಗಳು 'ಬಿ' ಯಿಂದ 'ಡಿ' ಯವರೆಗೆ ಮತ್ತು (3) ಹಾಲು ಮತ್ತು ಬ್ರೆಡ್ (ಪ್ರಥಮ ದರ್ಜೆಯದು) ಈ ವಸ್ತುಗಳ ಪೂರೈಕೆಗಾಗಿ ಆಡಳಿತ ವೈದ್ಯಾಧಿಕಾರಿ, ಸರಕಾರಿ ಸಾರ್ವಜನಿಕ ಆಸ್ಪತ್ರೆ, ಪುತ್ತೂರು ಇವರ ಕಛೇರಿಯಲ್ಲಿ ದಿನಾಂಕ: 23.03.09 ರಂದು ಪೂರ್ವಾಹ್ನ 12.30 ಗಂಟೆಯ ಮೊದಲು ನಿಗದಿಪಡಿಸಿದ ಮುದ್ರಿತ ಅರ್ಜಿ ನಮೂನೆಯಲ್ಲಿ ಮೊಹರಾದ ನಾಲ್ಕು ಪ್ರತಿಗಳಲ್ಲಿ ಟೆಂಡರುಗಳನ್ನು ಸ್ವೀಕರಿಸಲಾಗುವುದು ಮತ್ತು ಸ್ವೀಕೃತ ಟೆಂಡರುಗಳನ್ನು ಅದೇ ದಿನ ಅಪರಾಹ್ನ 3.00 ಗಂಟೆಗೆ ಉಪಸ್ಥಿತರಿರುವ ಟೆಂಡರುದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು.

ಟೆಂಡರನ್ನು ಸಲ್ಲಿಸುವ ಹಾಗೂ ತೆರೆಯುವ ದಿವಸವು ಆಕಸ್ಮಿಕವಾಗಿ ರಜಾ ದಿನವೆಂದು ಘೋಷಿತವಾದಲ್ಲಿ ಮರುದಿನ ಟೆಂಡರ್ ಸಲ್ಲಿಕೆ ಹಾಗೂ ತೆರೆಯುವ ದಿನವಾಗಿ ಪರಿಗಣಿಸಲಾಗುವುದೆಂದು ಸಾರ್ವಜನಿಕರ ಅವಗಾಹನೆಗೆ ಈ ಮೂಲಕ ಪ್ರಕಟಿಸಲಾಗಿದೆ. ಸರಕಾರದ ಅಧಿಸೂಚನೆ ಸಂಖ್ಯೆ ಪಿಡಬ್ಲ್ಯೂಡಿ: 154/ಇಸಿ/111/2000 ದಿನಾಂಕ: 24.10.2000ರ ಪ್ರಕಾರ ಟೆಂಡರುದಾರರು ಎರಡು ಮೊಹರಾದ ಕವರುಗಳನ್ನು ಸಲ್ಲಿಸಬೇಕಾಗಿರುತ್ತದೆ.

1. ಮೊದಲ ಕವರಿನಲ್ಲಿ ಇ.ಎಂ.ಡಿ. ಹಾಗೂ ಅಗತ್ಯ ದಾಖಲಾತಿಗಳು.
2. 2ನೇ ಕವರಿನಲ್ಲಿ ದರಪಟ್ಟಿ.

ಟೆಂಡರು ಫಾರಂಗಳನ್ನು ಸೆಟ್ ಒಂದರ (ನಾಲ್ಕು ಪ್ರತಿಗಳು) ರೂ. 20.00 (ರೂಪಾಯಿ ಇಪ್ಪತ್ತು ಮಾತ್ರ) ಪಾವತಿ ಮಾಡಿ ಆಡಳಿತ ವೈದ್ಯಾಧಿಕಾರಿ, ಸರಕಾರಿ ಸಾರ್ವಜನಿಕ ಆಸ್ಪತ್ರೆ, ಪುತ್ತೂರು ದ.ಕ. ಇವರ ಕಛೇರಿಯಿಂದ ದಿನಾಂಕ: 19.03.2009ರ ಪೂರ್ವಾಹ್ನ 12.00 ಗಂಟೆಗೆ ಮೊದಲು (ಭಾನುವಾರ ಹಾಗೂ ಸರಕಾರಿ ರಜಾ ದಿವಸವನ್ನು ಹೊರತುಪಡಿಸಿ) ಸವಿಸ್ತಾರ ಟೆಂಡರು ಅಧಿಸೂಚನೆಯೊಂದಿಗೆ ಪಡೆಯಬಹುದು.

ಆಡಳಿತ ವೈದ್ಯಾಧಿಕಾರಿ,
ಪಿ.ಆರ್. 207 ಸಾರ್ವಜನಿಕ ಆಸ್ಪತ್ರೆ, ಪುತ್ತೂರು, ದ.ಕ.

**ಸರಕಾರಿ ಸಾರ್ವಜನಿಕ ಆಸ್ಪತ್ರೆ, ಪುತ್ತೂರು, ತಾ|| ಪುತ್ತೂರು, ದ.ಕ.**

**ಅಲ್ಪಾವಧಿ ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಾ.ಆ.ಪು./ಟೆಂಡರ್/ ವೈ.ಸಾಮಗ್ರಿ/702/08–09, ದಿನಾಂಕ: 13ನೇ ಫೆಬ್ರವರಿ 2009**

ಸರಕಾರಿ ಸಾರ್ವಜನಿಕ ಆಸ್ಪತ್ರೆ, ಪುತ್ತೂರು ತಾ|| ಪುತ್ತೂರು ದ.ಕ. ಇಲ್ಲಿಗೆ ಸ್ಟ್ಯಾಂಡರ್ಡ್ ಕಂಪನಿಯ ಐ.ಎಸ್.ಐ. ಮಾರ್ಕಿನ ಉತ್ತಮ ಗುಣಮಟ್ಟದ ವೈದ್ಯಕೀಯ ಸಾಧನ ಸಲಕರಣಾ ಸಾಮಗ್ರಿಗಳು

1) ECG Monitor
2) Pulse Oxymetre
3) ICCU COT with other accessories
4) Diathermy / Electro cautery

(ಪ್ರತಿ ಸಾಮಾಗ್ರಿ ಒಂದೊಂದು) ಇವುಗಳನ್ನು ಖರೀದಿಸಿ ಅಳವಡಿಸಲು ಉದ್ದೇಶಿಸಿ ಈ ಸಂಬಂಧ ಅಧಿಕೃತ ಸರಬರಾಜುದಾರರು, ಮಾರಾಟಗಾರರು, ವಿತರಕರು, ಸಂಸ್ಥೆ, ಕಂಪನಿಗಳಿಂದ ಟೆಂಡರು ಕರೆಯಲಾಗಿದೆ. ಇಚ್ಛೆಯುಳ್ಳ ಟೆಂಡರುದಾರರು ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ನಿಯಮಾನುಸಾರ ದ್ವಿ ಲಕೋಟೆ ಪದ್ಧತಿ ಅನುಸರಿಸಿ ನಿಗದಿಪಡಿಸಿದ ನಮೂನೆಯ ಟೆಂಡರನ್ನು ದಿ. 17.03.09 ರ ಮಧ್ಯಾಹ್ನ (ಅಪರಾಹ್ನ) ಗಂಟೆ 3.30 ರ ವರೆಗೆ ಸಲ್ಲಿಸಬಹುದು. ಹೆಚ್ಚಿನ ವಿವರವನ್ನು ಸರಕಾರಿ ಸಾರ್ವಜನಿಕ ಆಸ್ಪತ್ರೆ ಪುತ್ತೂರು ದ.ಕ. ಇಲ್ಲಿನ ಕಛೇರಿಯಿಂದ ಕಛೇರಿ ವೇಳೆಯಲ್ಲಿ ಟೆಂಡರು ಪ್ರಕಟಣೆ ದಿನಾಂಕದಿಂದ ಪಡೆಯಬಹುದು.

1) ಟೆಂಡರು ಅರ್ಜಿ ನಿಗದಿತ ನಮೂನೆ ಪಡೆಯುವ ಕೊನೆಯ ದಿನಾಂಕ: 16.03.09 ರ ಅಪರಾಹ್ನ 3.30 ಗಂಟೆಯವರೆಗೆ.
2) ಟೆಂಡರು ಅರ್ಜಿ ನಮೂನೆ ಶುಲ್ಕ ರೂ. 100.00+12.5% ತೆರಿಗೆ ಸೇರಿ ಒಟ್ಟು ರೂ. 113.00 (ನಗದು ಅಥವಾ ಬ್ಯಾಂಕ್ ಡಿ.ಡಿ)
3) ಇ.ಎಂ.ಡಿ. (ಬ್ಯಾಂಕ್ ಡಿಡಿ) ರೂ. 10,000.00
4) ಟೆಂಡರು ಸಲ್ಲಿಸುವ ಕೊನೆಯ ದಿನಾಂಕ ಮತ್ತು ವೇಳೆ 17.03.09 ರ ಅಪರಾಹ್ನ 3.30 ಗಂಟೆವರೆಗೆ
5) ಸಲ್ಲಿಕೆಯಾದ ಟೆಂಡರು ತೆರೆಯುವ ದಿನಾಂಕ ಮತ್ತು ವೇಳೆ 17.03.09 ರ ಅಪರಾಹ್ನ 4.00 ಗಂಟೆಗೆ.
6) ಟೆಂಡರು ಅರ್ಜಿ ನಮೂನೆ ಪಡೆದುಕೊಳ್ಳುವ ಮತ್ತು ಟೆಂಡರು ಸಲ್ಲಿಸುವ ಮತ್ತು ಸಲ್ಲಿಕೆಯಾದ ಟೆಂಡರುಗಳನ್ನು ತೆರೆಯುವ ಮತ್ತು ಹೆಚ್ಚಿನ ಮಾಹಿತಿ ಪಡೆದುಕೊಳ್ಳಬಹುದಾದ ಸ್ಥಳ ಆಡಳಿತ ವೈದ್ಯಾಧಿಕಾರಿ, ಸರಕಾರಿ ಸಾರ್ವಜನಿಕ ಆಸ್ಪತ್ರೆ ಪುತ್ತೂರು ತಾ॥ ಪುತ್ತೂರು ದ.ಕ. ಇವರ ಕಛೇರಿ.
(ಕಚೇರಿ ದೂರವಾಣಿ ಸಂಖ್ಯೆ 08251–230338)

ಆಡಳಿತ ವೈದ್ಯಾಧಿಕಾರಿ,
ಪಿ.ಆರ್. 208 ಸರಕಾರಿ ಸಾರ್ವಜನಿಕ ಆಸ್ಪತ್ರೆ, ಪುತ್ತೂರು ದ.ಕ.

## ಪೊಲೀಸ್ ಅಧೀಕ್ಷಕರವರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

### ಬಹಿರಂಗ ಹರಾಜು ಪ್ರಕಟಣೆ

**ನಂ. ಲೆಕ್ಕ(5)112/2008, ದಿನಾಂಕ: 17ನೇ ಫೆಬ್ರವರಿ 2009**

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಪೊಲೀಸ್ ಇಲಾಖೆಯ ನಿರುಪಯುಕ್ತಗೊಳಿಸಲಾಗಿದುವ 5 ಮಹೇಂದ್ರ ಕಂಪನಿಯ ಜೀಪುಗಳು ಮತ್ತು 1 ಅಂಬಾಸಿಡರ್ ಕಾರು ಇವುಗಳನ್ನು ಟೆಂಡರ್ ಕಂ ಹರಾಜು ಮೂಲಕ ದಿ:17.03.2009 ರಂದು ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1. ಪೊಲೀಸ್ ಪ್ರಧಾನ ಕಛೇರಿ, ಬೆಂಗಳೂರು ರವರ ಆದೇಶ ನಂ. ವಾಸಾ(1)18/08–09, ದಿನಾಂಕ:31/12/2008.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಉಲ್ಲೇಖಿತ ಆದೇಶದಲ್ಲಿ ನಿರುಪಯುಕ್ತಗೊಳಿಸಲಾಗಿರುವ ಚಿಕ್ಕಮಗಳೂರು ಜಿಲ್ಲಾ ಪೊಲೀಸ್ ಇಲಾಖೆಯ ಈ ಕೆಳಕಂಡ ವಾಹನಗಳನ್ನು ದಿನಾಂಕ:17.03.2009 ರಂದು ಬೆಳಿಗ್ಗೆ 10.00 ಗಂಟೆಗೆ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಆವರಣ, ರಾಮನಹಳ್ಳಿ, ಚಿಕ್ಕಮಗಳೂರು ಇಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಆಸಕ್ತಿವುಳ್ಳ ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಿ ನಿರುಪಯುಕ್ತಗೊಳಿಸಿದ ವಾಹನಗಳನ್ನು ಖರೀದಿಸಬಹುದಾಗಿರುತ್ತದೆ. ವಾಹನಗಳ ವಿವರ ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನದ ನೊಂದಣಿ ಸಂಖ್ಯೆ | ಮಾದರಿ | ಖರೀದಿಸಿದ ವರ್ಷ |
|---|---|---|---|
| 1 | ಕೆಎ.18.ಜಿ.99 | ಅಂಬಾಸಿಡರ್ ಕಾರು | 1993 |
| 2 | ಕೆಎ.18.ಜಿ.118 | ಮಹೇಂದ್ರ ಕಮಾಂಡರ್ ಜೀಪು | 1993 |
| 3 | ಕೆಎ.09.ಜಿ.10 | ಮಹೇಂದ್ರ ಜೀಪು | 1990 |
| 4 | ಕೆಎ.09.ಎಂ.1450 | ಮಹೇಂದ್ರ ಜೀಪು | 1992 |
| 5 | ಕೆಎ.01.ಜಿ.820 | ಮಹೇಂದ್ರ ಜೀಪು | 1993 |
| 6 | ಕೆಎ.18.ಜಿ.88 | ಮಹೇಂದ್ರ ಜೀಪು | 1993 |

**ಹರಾಜಿನ ನಿಬಂಧನೆ ಮತ್ತು ಷರತ್ತುಗಳು:**

1. ನಿರುಪಯುಕ್ತ ವಾಹನಗಳು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಆವರಣ, ರಾಮನಹಳ್ಳಿ, ಚಿಕ್ಕಮಗಳೂರಿನಲ್ಲಿ ಹಾಲಿ ಯಾವ ಸ್ಥಿತಿಯಲ್ಲಿ ಇರುತ್ತವೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ಒಂದು ನಿರುಪಯುಕ್ತ ವಾಹನಕ್ಕೆ ರೂ.3,000–00 ಗಳಂತೆ ಠೇವಣಿ ಹಣವನ್ನು ಹರಾಜಿನ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಹಣ ಪಾವತಿಸದವರು ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

